KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೩೦, ೨೦೧೦ (ಆಶ್ವಯುಜ ೮ ಶಕ ವರ್ಷ ೧೯೩೨) | ಸಂಚಿಕೆ ೩೯ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು**

**ಸಂಖ್ಯೆ:ಆಸಾನಿ/47/ಆಡಳಿತ–2/200, ಬೆಂಗಳೂರು–1, ದಿನಾಂಕ:11ನೇ ಆಗಸ್ಟ್, 2010**

**ವಿಷಯ:** ಶ್ರೀ ಬಿ. ಬಾಬುಪ್ರಸಾದ್, ಬೆರಳಚ್ಚುಗಾರರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕೇಂದ್ರ ಕಚೇರಿ, ಬೆಂಗಳೂರು ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವುದನ್ನು ಕಾಯ್ದಿರಿಸಿ, ಅವರನ್ನು ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸುವುದರ ಕುರಿತು.

**ಉಲ್ಲೇಖ:**

1) ಜಂಟಿ ನಿರ್ದೇಶಕರು, ಕೃಷಿ ಅಂಕಿ ಅಂಶಗಳ ವಿಭಾಗ ಇವರ ಟಿಪ್ಪಣಿ ದಿನಾಂಕ 7.11.2009.
2) ಈ ಕಚೇರಿಯ ಜ್ಞಾಪನ ಪತ್ರದ ದಿನಾಂಕ 21.01.2010.
3) ಶ್ರೀ ಬಾಬುಪ್ರಸಾದ್, ಬೆರಳಚ್ಚುಗಾರರು ಇವರು ದಿನಾಂಕ 22.3.2010 ರಂದು ಸಲ್ಲಿಸಿದ ವಿವರಣೆ.
4) ಈ ಕಚೇರಿ ಜ್ಞಾಪನ ಪತ್ರದ ದಿನಾಂಕ 7.5.2010.
5) ಶ್ರೀ ಬಿ. ಬಾಬುಪ್ರಸಾದ್, ಬೆರಳಚ್ಚುಗಾರರು ಇವರು ದಿನಾಂಕ 14.6.2010 ರಂದು ಸಲ್ಲಿಸಿದ ವಿವರಣೆ.

**ಪ್ರಸ್ತಾವನೆ:**

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕೇಂದ್ರ ಕಚೇರಿ, ಬೆಂಗಳೂರು ಇಲ್ಲಿ ಬೆರಳಚ್ಚುಗಾರರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಬಿ. ಬಾಬುಪ್ರಸಾದ್ ಅವರು ದಿನಾಂಕ 30.9.2009 ರಿಂದ ಕಚೇರಿಗೆ ಗೈರು ಹಾಜರಾಗಿರುವುದಾಗಿ ಉಲ್ಲೇಖ (1)ರ ಟಿಪ್ಪಣಿಯಲ್ಲಿ ಕೇಂದ್ರ ಕಚೇರಿಯ ಜಂಟಿ ನಿರ್ದೇಶಕರು, ಕೃಷಿ ಅಂಕಿ ಅಂಶಗಳ ವಿಭಾಗ ಇವರು ತಿಳಿಸಿರುತ್ತಾರೆ. ಅದರಂತೆ ಉಲ್ಲೇಖ (2)ರ ಜ್ಞಾಪನದಲ್ಲಿ ಸದರಿಯವರಿಗೆ ಕೂಡಲೇ ಕಚೇರಿಗೆ ಹಾಜರಾಗುವಂತೆ ಸೂಚಿಸಿ ಜ್ಞಾಪನವನ್ನು ಅವರ ನಿವಾಸದ ವಿಳಾಸಕ್ಕೆ ಕಳುಹಿಸಲಾಗಿತ್ತು. ಆದರೆ ಅವರು ನೀಡಿರುವ ವಿಳಾಸದಲ್ಲಿ ವಾಸವಾಗಿಲ್ಲವೆಂದು ಅಂಚೆ ಇಲಾಖೆಯಿಂದ ಲಕೋಟೆ ವಾಪಸ್ಸು ಬಂದಿರುತ್ತದೆ. ಆನಂತರ ಈ ಕಚೇರಿಯ ಸಿಬ್ಬಂದಿಯವರನ್ನು ಸದರಿ ಜ್ಞಾಪನದ ಪ್ರತಿಯನ್ನು ಅವರ ನಿವಾಸದ ಬಾಗಿಲ ಮೇಲೆ ಅಂಟಿಸಿ ಬರಲು ನಿಯೋಜಿಸಲಾಗಿತ್ತು. ನಂತರ ಉಲ್ಲೇಖ(3)ರ ನೌಕರರ ಸಮಜಾಯಿಷಿಯಲ್ಲಿ ಅವರ ಅನಾರೋಗ್ಯದ ಕಾರಣ ದಿನಾಂಕ 30.9.2009 ರಿಂದ 31.3.2010ರ ವರೆಗೆ ವೈದ್ಯರು ವಿಶ್ರಾಂತಿ ಪಡೆಯಲು ಸೂಚಿಸಿದ್ದರಿಂದ ಕಚೇರಿ ಕೆಲಸಕ್ಕೆ ಹಾಜರಾಗಲು ಸಾದ್ಯವಾಗಲಿಲ್ಲ. ಆದ್ದರಿಂದ, ವೈದ್ಯಕೀಯ ರಜೆಯನ್ನು ಮಂಜೂರು ಮಾಡಿ ಅವರ ವಿರುದ್ಧ ಶಿಸ್ತು ಕ್ರಮವನ್ನು ಕೈಬಿಡುವಂತೆ ಕೋರಿರುತ್ತಾರೆ. ಆದರೆ ದಿನಾಂಕ 1.4.2010 ರಿಂದ ಕಚೇರಿಗೆ ಹಾಜರಾಗಬೇಕಿದ್ದ ಅವರು ಹಾಜರಾಗದಿದ್ದ ಕಾರಣ ಉಲ್ಲೇಖ (4)ರ ಜ್ಞಾಪನದಲ್ಲಿ ಇದುವರೆವಿಗೂ ಕಚೇರಿಗೆ ಹಾಜರಾಗದಿರುವುದಕ್ಕೆ ಕಾರಣ ನೀಡಿರುವುದಿಲ್ಲ. ಆದ್ದರಿಂದ ನಿಮ್ಮ ವಿರುದ್ಧ ಏಕೆ ಶಿಸ್ತು ಕ್ರಮ ಕೈಗೊಳ್ಳಬಾರದೆಂಬುದಕ್ಕೆ ವಿವರಣೆಯನ್ನು ನೀಡಲು ಹಾಗೂ ಕೂಡಲೇ ಕಚೇರಿಗೆ ಹಾಜರಾಗುವಂತೆ ಸೂಚಿಸಲಾಗಿತ್ತು. ಉಲ್ಲೇಖ (5)ರ ನಿವೇದನೆಯಲ್ಲಿ ಅವರ ಅನಾರೋಗ್ಯ ಇನ್ನೂ ಸುಧಾರಿಸಿಲ್ಲದ ಕಾರಣ ಅವರನ್ನು ಪರಿಶೀಲಿಸಿದ ವೈದ್ಯರು ಇನ್ನೂ ಕನಿಷ್ಠ ಎರಡು ತಿಂಗಳು ಅಂದರೆ ಜುಲೈ 31ರ ವರೆಗೆ ವಿಶ್ರಾಂತಿ ಪಡೆದುಕೊಳ್ಳುವಂತೆ ಸೂಚಿಸಿರುವುದರಿಂದ ಅವರ ರಜೆಯನ್ನು ಜುಲೈ 31ರ ವರೆಗೆ ವಿಸ್ತರಿಸುವಂತೆ ಹಾಗೂ ವೈದ್ಯಕೀಯ ಪ್ರಮಾಣ ಪತ್ರವನ್ನು ಕಚೇರಿಗೆ ಹಾಜರಾದ ನಂತರ ಸಲ್ಲಿಸುವುದಾಗಿ ತಿಳಿಸಿರುತ್ತಾರೆ. ಅದರಂತೆ ಸದರಿಯವರು ದಿನಾಂಕ 1.8.2010ರಂದು ಕಚೇರಿಗೆ ಹಾಜರಾಗಬೇಕಿತ್ತು. ಅದರೆ ಇಂದಿನವರೆವಿಗೂ ಯಾವುದೇ

ಮಾಹಿತಿಯನ್ನು ಸಹ ಸಲ್ಲಿಸದೇ ಕಚೇರಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಮೇಲ್ಕಂಡ ರಜಾ ಅವಧಿಯು ಅಂದರೆ ದಿನಾಂಕ 30.9.2009 ರಿಂದ 31.7.2010ಕ್ಕೆ 305 ದಿನಗಳು ಅವರು ಗೈರು ಹಾಜರಾಗಿರುತ್ತಾರೆ. ಇದರಿಂದ ಕಚೇರಿ ಕೆಲಸಕ್ಕೆ ತೊಂದರೆ ಉಂಟಾಗುತ್ತಿರುವುದನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಚೇರಿ ಆದೇಶ ಸಂಖ್ಯೆ: ಆಡಳಿತ : 365 :2010–11**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಮತ್ತು ಶಿಸ್ತು ಪ್ರಾಧಿಕಾರಿಯಾದ ನಾನು ಶ್ರೀ ಬಿ. ಬಾಬುಪ್ರಸಾದ್, ಬೆರಳಚ್ಚುಗಾರರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕೇಂದ್ರ ಕಚೇರಿ, ಬೆಂಗಳೂರು ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 10(3) ರಂತೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಈ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಿರುತ್ತೇನೆ.

ಶ್ರೀ ಬಿ. ಬಾಬುಪ್ರಸಾದ್, ಅಮಾನತ್ತುಗೊಂಡ ಬೆರಳಚ್ಚುಗಾರರು ಪ್ರತಿ ತಿಂಗಳು ಆ ತಿಂಗಳು ಮುಕ್ತಾಯವಾದ ತಕ್ಷಣ ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1957ರ ನಿಯಮ: 97–ಎರ ಅನ್ವಯ ಹಾಗೂ ನಿಯಮ: 98(2)ರ ಅನ್ವಯ ಪ್ರಮಾಣ ಪತ್ರ ಸಲ್ಲಿಸಿದಲ್ಲಿ ನಿಯಮಾನುಸಾರ ಅವರಿಗೆ ಜೀವನಾಧಾರ ಭತ್ಯೆ ಸಂದಾಯ ಮಾಡಬಹುದಾಗಿದೆ.

**ಹೆಚ್.ಇ. ರಾಜಶೇಖರಪ್ಪ**

ಪಿ.ಆರ್.1294

ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು**

**ಸಂಖ್ಯೆ: ಆಸಾಂನಿ/248/ಆಡಳಿತ–2/08–09, ಬೆಂಗಳೂರು, ದಿನಾಂಕ:18ನೇ ಆಗಸ್ಟ್, 2010**

**ವಿಷಯ:** ಶ್ರೀ ಎ. ರಾಜೇಂದ್ರ, ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಛೇರಿ, ದಾವಣಗೆರೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಗುರುತರವಾದ ಕರ್ತವ್ಯ ಲೋಪಗಳಿಗೆ ಸಂಬಂಧಿಸಿದಂತೆ ಇವರ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸುವುದರ ಕುರಿತು.

**ಉಲ್ಲೇಖ:**

1) ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು, ದಾವಣಗೆರೆ, ಇವರ ಅರೇ ಸರ್ಕಾರಿ ಪತ್ರದ ಸಂಖ್ಯೆ: ಜಿಸಂಸಂ/ದಾವ/ಆಡಳಿತ/ಸಾನಿ/ದಾವ/2008–09, ದಿನಾಂಕ: 09.01.2009 ಮತ್ತು ಅದರೊಂದಿಗೆ ಲಗತ್ತಿಸಲಾದ 76 ಪುಟಗಳ ದಾಖಲಾತಿಗಳು.
2) ಈ ನಿರ್ದೇಶನಾಲಯದ (1)ಕಚೇರಿ ಆದೇಶಗಳ ಸಂಖ್ಯೆ: ಆಡಳಿತ/553/08–09,ದಿನಾಂಕ:24.01.2009 ಮತ್ತು (2) ಆಡಳಿತ/209/09–10, ದಿನಾಂಕ: 20.07.2009.
3) ಶ್ರೀ ಎ. ರಾಜೇಂದ್ರ ಸಾಂಖ್ಯಿಕ ನಿರೀಕ್ಷಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 11ರ ಅನ್ವಯ ಹೊರಡಿಸಲಾದ ಇದೇ ಕ್ರಮಾಂಕದ ಕಾರಣ ಕೇಳುವ ಜ್ಞಾಪನದ ದಿನಾಂಕ: 04.06.2010 ಹಾಗೂ ಶ್ರೀ ಎ. ರಾಜೇಂದ್ರ ಅಮಾನತ್ತಿನಲ್ಲಿರುವ ಸಾಂಖ್ಯಿಕ ನಿರೀಕ್ಷಕರು, ಇವರ ಸ್ವೀಕೃತಿ, ದಿನಾಂಕ: 14.06.2010.

**ಪ್ರಸ್ತಾವನೆ:**

ಶ್ರೀಮತಿ ಎಂ.ಜಿ. ಉಮಾದೇವಿ ಕೋಂ ಸಿ. ನಾಗರಾಜ, ಪ್ರಸ್ತುತ ಜಿಡ್ಡಿಕೇರಿ, ಜಗಳೂರು ಟೌನ್, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರು ವಾಸ್ತವವಾಗಿ ದಿನಾಂಕ: 20.6.1988 ರಂದು ಜನನವಾಗಿದ್ದು, ಅವರು ಇದಕ್ಕೆ ಆಧಾರವಾಗಿ ಅವರ ವಾಸ್ತವವಾದ "ಜನನ ದಿನಾಂಕ 20.6.1988"ನ್ನು ಹೊಂದಿದ (1)ನೇ ತರಗತಿಯಿಂದ 7ನೇ ತರಗತಿಯ ವರೆಗೆ ಅವರು ವ್ಯಾಸಂಗ ಮಾಡಿದ ಕುರಿತು ಸಲ್ಲಿಸಿದ್ದ ಪ್ರಮಾಣ ಪತ್ರ (2) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಇವರು ನೀಡಲಾದ ಎಸ್.ಎಸ್.ಎಲ್.ಸಿ. ಪರೀಕ್ಷೆ ತೇರ್ಗಡೆ ಹೊಂದಿದ ಪ್ರಮಾಣ ಪತ್ರ (3) ನಲಂದ ಪದವಿ ಪೂರ್ವ ಕಾಲೇಜ್, ಜಗಳೂರು (ದಾವಣಗೆರೆ ಜಿಲ್ಲೆ) ಇವರು ನೀಡಲಾದ ವರ್ಗಾವಣೆ ಪ್ರಮಾಣ ಪತ್ರ ಇತ್ಯಾದಿ ದಾಖಲಾತಿಗಳೊಂದಿಗೆ ಜಿಲ್ಲಾಧಿಕಾರಿಗಳು, ದಾವಣಗೆರೆ ಇವರಿಗೆ ಸಲ್ಲಿಸಿದ ದೂರನ್ನು ಪರಿಶೀಲಿಸಿ ಜಿಲ್ಲಾಧಿಕಾರಿಗಳು, ದಾವಣಗೆರೆ ಇವರ ಪತ್ರದ ಸಂಖ್ಯೆ: ಎಡಿಎಂ/ಸಿಆರ್/179/08–09, ದಿನಾಂಕ 30.12.2008ರ ಅನ್ವಯ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು ಪೂರ್ವಭಾವಿ ವಿಚಾರಣೆ ಕೈಗೊಂಡು ಉಲ್ಲೇಖ(1)ರಲ್ಲಿ ತಿಳಿಸಲಾದ ಪತ್ರದೊಂದಿಗೆ ಸಲ್ಲಿಸಿದ್ದ "ಪೂರ್ವಭಾವಿ ವಿಚಾರಣಾ" ವರದಿಯಲ್ಲಿನ ಮೊದಲನೆಯ ಅಂಶದಲ್ಲಿ ಇನ್ನಿತರ ವಿಷಯಗಳೊಂದಿಗೆ ಸದರಿ ದೂರು ಸಲ್ಲಿಸಿದ ಶ್ರೀಮತಿ ಉಮಾದೇವಿ ಇವರು ಜಗಳೂರು ತಾಲ್ಲೂಕು, ಯರ್ರಲಕಟ್ಟೆಯಲ್ಲಿ ದಿನಾಂಕ: 20.6.1988 ರಂದು ವಾಸ್ತವವಾಗಿ ಜನನವಾಗಿದ್ದರೂ, ಶ್ರೀ ಎ. ರಾಜೇಂದ್ರ, ಸಾಂಖ್ಯಿಕ ನಿರೀಕ್ಷಕರು ಇವರು ಸದರಿ ದೂರು ನೀಡಿದ ಶ್ರೀಮತಿ ಉಮಾದೇವಿ ಇವರ ತಾಯಿ ಸಲ್ಲಿಸಿದ ಅರ್ಜಿಗೆ ಸಂಬಂಧಿಸಿದಂತೆ ನವೆಂಬರ್ 1986ನೇ ಇಸವಿಯ ನಿಟ್ಟುವಳ್ಳಿ ಗ್ರಾಮ, ದಾವಣಗೆರೆ ತಾಲ್ಲೂಕು ಜನನ ಮತ್ತು ಮರಣ ನೋಂದಣಿಯ ರಿಜಿಸ್ಟರ್‌ನ ಹಳೆಯ ದಾಖಲೆಗಳನ್ನು ತೆಗೆದುಕೊಂಡು ಶ್ರೀಮತಿ ಎಂ.ಜಿ. ಉಮಾದೇವಿಯವರ ಹುಟ್ಟಿದ ದಿನಾಂಕವನ್ನು ಅನಧಿಕೃತವಾಗಿ ಸುಳ್ಳು ದಿನಾಂಕವನ್ನು ನಮೂದಿಸಿ ಕರ್ತವ್ಯ ಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ ಎಂದು, ಎರಡನೆಯ ಅಂಶದಲ್ಲಿ ಸದರಿ ಸಾಂಖ್ಯಿಕ ನಿರೀಕ್ಷಕರಾದ ಶ್ರೀ ಎ. ರಾಜೇಂದ್ರ, ಇವರು ಈ ಘಟನೆ ಜರುಗಿದ ದಿನಾಂಕಗಳಂದು ಪ್ರವಾಸದಲ್ಲಿದ್ದುದಾಗಿ ಹೇಳಿದ್ದರೂ, ಆ ದಿನಗಳಂದು ಕಚೇರಿಯಲ್ಲಿ ಇದ್ದು ಸದರಿಯವರ ಜನನ ಪ್ರಮಾಣ ಪತ್ರದ ನಕಲನ್ನು ಹಾಗೂ ನಮೂನೆ–110 ದೃಢೀಕೃತ ಜೆರಾಕ್ಸ್ ಪ್ರತಿಯನ್ನು ತಯಾರಿಸಿದ್ದಾಗ್ಯೂ, ಸದರಿ ಪ್ರಮಾಣ ಪತ್ರದ ನಕಲನ್ನು ತಯಾರಿಸುವಾಗ ಮೂಲ ದಾಖಲೆಯಾದ ನಮೂನೆ–11 ರಲ್ಲಿನ ವ್ಯತ್ಯಾಸದ ಕುರಿತು ಮೇಲಧಿಕಾರಿಗಳ ಗಮನಕ್ಕೆ ತಂದಿರುವುದಿಲ್ಲವೆಂದೂ, ಹಾಗೂ ವರದಿಯ 3ನೇ ಅಂಶದಲ್ಲಿ ಸದರಿ ಸಾಂಖ್ಯಿಕ ನಿರೀಕ್ಷಕರು ಅವರಿಗೆ ವಹಿಸಲಾದ ಸರ್ಕಾರದ ಕರ್ತವ್ಯಗಳ

ನಿರ್ವಹಣೆಯಲ್ಲಿಯೂ ಸಹ ನಿರ್ಲಕ್ಷತೆಯನ್ನು ಪ್ರದರ್ಶಿಸಿರುವುದಕ್ಕೆ ಸಂಬಂಧಿಸಿದಂತೆ ಹಾಗೂ ತಾಲ್ಲೂಕು ಕಚೇರಿಗಳಲ್ಲಿ ಮತ್ತು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಏರ್ಪಡಿಸಲಾಗುವ ಮಾಸಿಕ ಪ್ರಗತಿ ಪರಿಶೀಲನಾ ಸಭೆಗಳಿಗೆ ಅನುಮತಿ ಪಡೆಯದೇ ಗೈರು ಹಾಜರಾಗಿರುವುದಕ್ಕೆ ಮತ್ತು ಪ್ರತಿ ತಿಂಗಳು ದಿನಚರಿ ನೀಡದೇ ಇರುವುದಕ್ಕೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ನೀಡಿದ ಕಾರಣ ಕೇಳುವ ಜ್ಞಾಪನಗಳ ಕುರಿತು ವಿವರಿಸಿ, ಸದರಿ ಸಾಂಖ್ಯಿಕ ನಿರೀಕ್ಷಕರು ಸರ್ಕಾರದ ಕರ್ತವ್ಯಗಳ ನಿರ್ವಹಣೆಯಲ್ಲಿ ನಿರ್ಲಕ್ಷತೆ ಮನೋಭಾವನೆಯನ್ನು ಬೆಳೆಸಿಕೊಂಡಿರುವುದಲ್ಲದೆ ಕರ್ತವ್ಯ ಲೋಪವೆಸಗಿರುತ್ತಾರೆಂದು ನಮೂದಿಸಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕೋರಿದ್ದರು.

ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ದಾವಣಗೆರೆ ಇವರು ಉಲ್ಲೇಖದಲ್ಲಿನ ಪ್ರಸ್ತಾವನೆಯಲ್ಲಿ ಒಳಗೊಂಡಿರುವ ಮೇಲೆ ತಿಳಿಸಲಾದ ಅಂಶಗಳನ್ನು ಹಾಗೂ ವರದಿಯೊಂದಿಗೆ ಒದಗಿಸಲಾದ ದಾಖಲಾತಿಗಳನ್ನು ಪರಿಶೀಲಿಸಲಾಗಿ ಶ್ರೀ ಎ. ರಾಜೇಂದ್ರ, ಸಾಂಖ್ಯಿಕ ನಿರೀಕ್ಷಕರನ್ನು ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಈ ನಿರ್ದೇಶನಾಲಯದ ಆದೇಶ ಸಂಖ್ಯೆ: ಆಡಳಿತ: 553:2008–09, ದಿನಾಂಕ: 24.01.2009ರಲ್ಲಿ ಶ್ರೀ ಎ. ರಾಜೇಂದ್ರ, ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಚೇರಿ, ದಾವಣಗೆರೆ (ದಾವಣಗೆರೆ ಜಿಲ್ಲೆ) ಇವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಏರ್ಪಡಿಸುವುದನ್ನು ಕಾಯ್ದಿರಿಸಿ ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಸದರಿ ಅಮಾನತ್ತಿನಲ್ಲಿದ್ದ ಸಾಂಖ್ಯಿಕ ನಿರೀಕ್ಷಕರ ಪ್ರಕರಣಕ್ಕೆ ಸಂಬಂದಿಸಿದಂತೆ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು ಒದಗಿಸಿದ ದಾಖಲಾತಿಗಳನ್ನು ಪರಿಶೀಲಿಸಲಾಗಿ ಅದೇ ವಿಷಯಕ್ಕೆ ಸಂಬಂದಿಸಿದಂತೆ, ಮೇಲೆ ತಿಳಿಸಲಾದ ಶ್ರೀಮತಿ ಉಮಾದೇವಿ, ಇವರು ಶ್ರೀ ರಾಜೇಂದ್ರ, ಸಾಂಖ್ಯಿಕ ನಿರೀಕ್ಷಕರು ಇವರ ವಿರುದ್ಧ ಅದೇ ಆರೋಪಕ್ಕೆ ಸಂಬಂದಿಸಿದಂತೆ, ಕರ್ನಾಟಕ ಲೋಕಾಯುಕ್ತರ ಮುಂದೆ ದೂರೊಂದನ್ನು ಸಲ್ಲಿಸಿದ್ದರಿಂದ, ಆ ದೂರು ಕುರಿತು ಪೋಲೀಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ದಾವಣಗೆರೆ ಇವರು ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇಲ್ಲಿಗೆ ಒಂದು ವರದಿಯನ್ನು ದಿನಾಂಕ: 22.06.2009 ರಂದು ಸಲ್ಲಿಸಿದ್ದರಿಂದ ಲೋಕಾಯುಕ್ತ ಕಛೇರಿಯಿಂದ ಅಥವಾ ಈ ನಿರ್ದೇಶನಾಲಯದಿಂದ, ಸದರಿ ಸಾಂಖ್ಯಿಕ ನಿರೀಕ್ಷಕರ ವಿರುದ್ಧ ಇಲಾಖಾ ವಿಚಾರಣೆಯನ್ನು ಏರ್ಪಡಿಸುವುದನ್ನು ಕಾಯ್ದಿರಿಸಿ ಹಾಗೂ ದಿನಾಂಕ: 29.06.2009ರ ಸದರಿ ಸಾಂಖ್ಯಿಕ ನಿರೀಕ್ಷಕರ ಕೋರಿಕೆಯನ್ನು ಪರಿಗಣಿಸಿ, ಈ ನಿರ್ದೇಶನಾಲಯದ ಆದೇಶ ಸಂಖ್ಯೆ: ಆಡಳಿತ:209:2009–10, ದಿನಾಂಕ: 20.7.2009ರಲ್ಲಿ ಶ್ರೀ ಎ.ರಾಜೇಂದ್ರ, ಹಿಂದಿನ ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಚೇರಿ, ದಾವಣಗೆರೆ (ದಾವಣಗೆರೆ ಜಿಲ್ಲೆ) ಇವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಏರ್ಪಡಿಸುವುದನ್ನು ಕಾಯ್ದಿರಿಸಿ ಸರ್ಕಾರದ ಸೇವೆಗೆ ಪುನರ್ ಸ್ಥಾಪಿಸಿ ತಾಲ್ಲೂಕು ಕಛೇರಿ, ಹೊನ್ನಾಳಿ, (ದಾವಣಗೆರೆ ಜಿಲ್ಲೆ) ಕಛೇರಿಯಲ್ಲಿ ಖಾಲಿ ಇರುವ ಸಾಂಖ್ಯಿಕ ನಿರೀಕ್ಷಕರ ಹುದ್ದೆಗೆ ನೇಮಕಾತಿ ಮಾಡಲಾಗಿದೆ.

ಮಾನ್ಯ ಕರ್ನಾಟಕ ಲೋಕಾಯುಕ್ತರವರ ಕಚೇರಿಯ ಪತ್ರದ ದಿನಾಂಕ: 29.03.2010ರ ಅನ್ವಯ, ಶ್ರೀ ಎ. ರಾಜೇಂದ್ರ ಸಾಂಖ್ಯಿಕ ನಿರೀಕ್ಷಕರ ಅವರ ವಿರುದ್ಧದ ಇಲಾಖಾ ವಿಚಾರಣೆಗಳಿಗೆ ಸಂಬಂಧಿಸಿದಂತೆ ಪ್ರಾರಂಭಿಕವಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957ರ ಅನ್ವಯ, ಅವರ ವಿರುದ್ಧದ ದೋಷಾರೋಪಣಾ ಪಟ್ಟಿಯನ್ನು ಒಳಗೊಂಡಂತೆ ಉಲ್ಲೇಖ (3)ರಲ್ಲಿನ "ಕಾರಣ ಕೇಳಿದ ಜ್ಞಾಪನ" ನೀಡಿ, ಅದನ್ನು ಸ್ವೀಕರಿಸಿದ 15 ದಿನಗಳ ಒಳಗಾಗಿ ಅವರ ಲಿಖಿತ ವಿವರಣೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅವರ ವಿರುದ್ಧದ ದೋಷಾರೋಪಣಾ ಪಟ್ಟಿಯನ್ನು ಈ ಕೆಳಗೆ ಪುನರುಚ್ಛರಿಸಲಾಗಿದೆ:–

**ಆರೋಪ: 1**

ಶ್ರೀಮತಿ ಮಲ್ಲಮ್ಮ ಇವರು ದಿನಾಂಕ 26.11.1986ರಂದು ತಮ್ಮ ಮಗಳ ಜನನವಾಗಿದ್ದು, ಈ ಸಂಬಂಧ ಜನನ ಪ್ರಮಾಣ ಪತ್ರವನ್ನು ನೀಡುವಂತೆ ದಿನಾಂಕ 17.09.2008ರಂದು ತಹಶೀಲ್ದಾರರು, ದಾವಣಗೆರೆ ತಾಲ್ಲೂಕು, ದಾವಣಗೆರೆ ಇವರಿಗೆ ಮನವಿಯನ್ನು ಸಲ್ಲಿಸಿದ್ದು, ಸದರಿ ಅರ್ಜಿಯನ್ನು ದಿನಾಂಕ 18.9.2008ರಂದು ಗಣತಿದಾರರಿಂದ ನೀವು ತೆಗೆದುಕೊಂಡು ನಂತರ ದಾಖಲಾತಿ ಕೊಠಡಿಯಿಂದ ಜನನ ವಹಿಯ ಮೂಲ ದಾಖಲಾತಿಯಾದ ನಮೂನೆ–IIನ್ನು ತೆಗೆದುಕೊಂಡು ದಿನಾಂಕ 19.9.2008ರಂದು ಜನನ ಪ್ರಮಾಣ ಪತ್ರವನ್ನು ಗಣತಿದಾರರಿಂದ ಬರೆಸಿರುವುದಲ್ಲದೇ ಅದರಲ್ಲಿರುವ ಸುಳ್ಳು ದಾಖಲೆಯನ್ನು ಅಥವಾ ವ್ಯತ್ಯಾಸವನ್ನು ನೋಡಿದ್ದರೂ ಸಹ ಮೇಲಾಧಿಕಾರಿಗಳ ಗಮನಕ್ಕೆ ತರದೇ ಆ ದಿವಸ ಉದ್ದೇಶಪೂರ್ವಕವಾಗಿ ಬೆಳಿಗ್ಗೆ 7–00 ಗಂಟೆಗೆ ಪ್ರವಾಸಕ್ಕೆ ತೆರಳಿರುವುದಾಗಿ ದಿನಚರಿಯನ್ನು ಸಲ್ಲಿಸಿರುವುದನ್ನು ಕರ್ತವ್ಯಲೋಪ ಎಂದು ಪರಿಗಣಿಸಲಾಗಿದ್ದು, ಕರ್ನಾಟಕ ನಾಗರಿಕ ಸೇವಾ(ನಡತೆ) ನಿಯಮಗಳು, 1966 ರ ನಿಯಮ: 3ನ್ನು ಉಲ್ಲಂಘಿಸಿ ಸರ್ಕಾರಕ್ಕೆ ನಂಬಿಕೆ ದ್ರೋಹ ಎಸಗಿದ್ದರಿಂದ, ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

**ಆರೋಪ: 2**

ಶ್ರೀ ಸಿ. ನಾಗರಾಜ್ ಬಿನ್ ಚನ್ನಪ್ಪ, ಜಗಳೂರು ತಾಲ್ಲೂಕು, ಜಗಳೂರು ಇವರು ದಿನಾಂಕ 18.11.2008ರಂದು ತಹಶೀಲ್ದಾರರು, ದಾವಣಗೆರೆ ತಾಲ್ಲೂಕು, ದಾವಣಗೆರೆ ಇವರಿಗೆ ಸಲ್ಲಿಸಿರುವ ಮನವಿಯ ಪ್ರಕಾರ ನೀವು ದಿನಾಂಕ 18.11.2008 ರಂದೇ ಜನನ ಪ್ರಮಾಣ ಪತ್ರದ ನಕಲು ಹಾಗೂ ನಮೂನೆ–IIರ ದೃಢೀಕೃತ ಜೆರಾಕ್ಸ್ ಪ್ರತಿಯನ್ನು ತಯಾರಿಸಿರುತ್ತೀರಿ, ಆದರೆ ಈ ಸಮಯದಲ್ಲಿಯೂ ಸಹ ನಮೂನೆ–IIರಲ್ಲಿರುವ ಸುಳ್ಳು ದಾಖಲೆಯನ್ನು ಅಥವಾ ವ್ಯತ್ಯಾಸವನ್ನು ಮೇಲಧಿಕಾರಿಗಳ ಗಮನಕ್ಕೆ ತಂದಿರುವುದಿಲ್ಲವಾದ್ದರಿಂದ, ಇಲ್ಲಿಯೂ ಸಹ ಉದ್ದೇಶಪೂರ್ವಕವಾಗಿ ಕರ್ತವ್ಯಲೋಪವೆಸಗಿರುವುದು ಕಂಡುಬಂದಿದ್ದು, ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966 ರ ನಿಯಮ: 3ನ್ನು ಉಲ್ಲಂಘಿಸಿದ್ದರಿಂದ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

**ಆರೋಪ: 3**

ಕಚೇರಿಯ ಕೆಲಸ ಕಾರ್ಯಗಳಲ್ಲಿ ನಿರ್ಲಕ್ಷತೆಯನ್ನು ತೋರುತ್ತಿರುವುದು ಹಾಗೂ ತಾಲ್ಲೂಕು ಕಚೇರಿಯಲ್ಲಿ ಮತ್ತು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ನಡೆಯುವ ಮಾಸಿಕ ಪ್ರಗತಿ ಪರಿಶೀಲನಾ ಸಭೆಗೆ ಅನುಮತಿ ಪಡೆಯದೇ ಗೈರು ಹಾಜರಾಗಿರುವುದು ಮತ್ತು ಪ್ರತಿ ಮಾಹೆಯ ದಿನಚರಿ ವಿವರಗಳನ್ನು ನೀಡದೇ ಇರುವುದನ್ನು ಕರ್ತವ್ಯಲೋಪ ಎಂದು ಪರಿಗಣಿಸಿ, ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

**ಆರೋಪ: 4**

ಶ್ರೀ ಎ. ರಾಜೇಂದ್ರ, ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಚೇರಿ, ದಾವಣಗೆರೆ ಆದ ನೀವು ದಿನಾಂಕ 03.01.2009 ಮತ್ತು 09.01.2009 ರಿಂದ 31.01.2009ರ ವರೆಗೆ ಕಚೇರಿಗೆ ಅನಧಿಕೃತ ಗೈರು ಹಾಜರಾಗಿದ್ದು, ನಿಮ್ಮ ಗೈರುಹಾಜರಿಯನ್ನು ಕ.ನಾ.ಸೇ.ನಿ. ನಿಯಮ: 106(ಎ) ಪ್ರಕಾರ ಅನಧಿಕೃತ ಗೈರು ಹಾಜರಿಯೆಂದು ಪರಿಗಣಿಸಲಾಗಿದ್ದರೂ, ಸರ್ಕಾರದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿ, ನಿಮಗೆ ವಹಿಸಲಾದ ಕರ್ತವ್ಯಗಳ ನಿರ್ವಹಣೆಯಲ್ಲಿ ಬೇಜವಾಬ್ದಾರಿಯಾಗಿ ವರ್ತಿಸಿದ್ದರಿಂದ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

ಆದರೆ, ಮೇಲೆ ತಿಳಿಸಲಾದ **"ಕಾರಣ ಕೇಳುವ ಜ್ಞಾಪನವನ್ನು"** ಶ್ರೀ ಎ.ರಾಜೇಂದ್ರ, ಸಾಂಖ್ಯಿಕ ನಿರೀಕ್ಷಕರು, ದಿನಾಂಕ: 14.06.2010 ರಂದೇ ಸ್ವೀಕರಿಸಿದ್ದಾಗ್ಯೂ, ಪ್ರತಿ (ಸ್ವೀಕೃತಿ ಅಡಕ: 1 ರಲ್ಲಿದೆ) ಇಲ್ಲಿಯ ವರೆಗೂ ಅವರ ಲಿಖಿತ ವಿವರಣೆಯನ್ನು ಸಲ್ಲಿಸಿರುವುದಿಲ್ಲ.

ಆಪಾದಿತ ಸರ್ಕಾರಿ ನೌಕರರು ಅವರ ಪ್ರತಿವಾದದ ಲಿಖಿತ ಹೇಳಿಕೆಯನ್ನು ನಿಗದಿತ ಅವಧಿಯೊಳಗಾಗಿ ನಿಲ್ಲಿಸದೆ ಇದ್ದಂಥಹ ಪ್ರಕರಣಗಳಲ್ಲಿ (ಅಥವಾ ಆತನಿಂದ ಅವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ಯಾವುದೇ ರೀತಿಯ ಪ್ರತಿಕ್ರಿಯೆ ಬಾರದೆ ಇದ್ದಲ್ಲಿ), ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ನಿಯಮ: 11(5)ರ ಅನ್ವಯ **"ಶಿಸ್ತು ಪ್ರಾಧಿಕಾರಿಯು ತಾನೇ ಸ್ವತಃ ಆರೋಪಗಳ ವಿಷಯಗಳ ಕುರಿತು ವಿಚಾರಣೆ ಮಾಡಬಹುದು ಅಥವಾ ವಿಚಾರಣಾ ಪ್ರಾಧಿಕಾರಿಯನ್ನು ನೇಮಿಸಬಹುದಾಗಿದೆ."**

ಅಂತಿಮವಾಗಿ, ಶ್ರೀ ಎ.ರಾಜೇಂದ್ರ, ಸಾಂಖ್ಯಿಕ ನಿರೀಕ್ಷಕರು, ಉಲ್ಲೇಖ (3)ರಲ್ಲಿ ತಿಳಿಸಲಾದ **"ಕಾರಣ ಕೇಳುವ ಜ್ಞಾಪನಕ್ಕೆ"** ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸದೆ ಇರುವುದನ್ನು ಪರಿಶೀಲಿಸಿ, ಶ್ರೀ ಎ. ರಾಜೇಂದ್ರ ಸಾಂಖ್ಯಿಕ ನಿರೀಕ್ಷಕರು, ಇವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣಾ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 11ರ ಅಡಿಯಲ್ಲಿ ಇಲಾಖಾ ವಿಚಾರಣೆ ಏರ್ಪಡಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಚೇರಿ ಆದೇಶದ ಸಂಖ್ಯೆ: ಆಡಳಿತ/379/2010–11**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿ ಅಪಾದಿತ ಸರ್ಕಾರಿ ನೌಕರರಾದ ಶ್ರೀ ಎ. ರಾಜೇಂದ್ರ, ಹಿಂದಿನ ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಚೇರಿ, ದಾವಣಗೆರೆ, (ಪ್ರಸ್ತುತ ತಾಲ್ಲೂಕು ಕಚೇರಿ ಹೊನ್ನಾಳಿ) ಇವರ ವಿರುದ್ಧದ ಇಲಾಖಾ ವಿಚಾರಣೆ ಏರ್ಪಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11(5)ನ್ನು ಒದುವುದರೊಂದಿಗೆ ಅದೇ ನಿಯಮದ ಉಪ ನಿಯಮ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಜಿ. ಹಿರೇಮಠ, ನಿವೃತ್ತ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಅದೇ ನಿಯಮಗಳ ನಿಯಮ: 11 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು 3–ತಿಂಗಳೊಳಗಾಗಿ ಸಲ್ಲಿಸುವಂತೆ ನಿರ್ದೇಶಿಸಲಾಗಿದೆ.

ಮುಂದುವರೆದು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ:11ರ ಉಪ ನಿಯಮ (5) (ಸಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿಸ್ತು ಪ್ರಾಧಿಕಾರದ ಪರವಾಗಿ ಈ ಪ್ರಕರಣವನ್ನು ಏರ್ಪಡಿಸಲು ಶ್ರೀ ಎಂ.ಎನ್. ಚಾಕರಿ, ಸಹಾಯಕ ನಿರ್ದೇಶಕರು, (ಎ.ಆರ್.ಸಿ.ವಿಭಾಗ), ಕೇಂದ್ರ ಕಚೇರಿ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು, ಈ ಪ್ರಕರಣದ ವಿಚಾರಣೆಯನ್ನು ಈ ನಿರ್ದೇಶನಾಲಯದ ಕೇಂದ್ರ ಕಚೇರಿಯಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಬಹುದಾದ ಸ್ಥಳದಲ್ಲಿ ಏರ್ಪಡಿಸಬಹುದಾಗಿರುತ್ತದೆ. ಈ ಪ್ರಕರಣದ ವಿಚಾರಣೆಗಾಗಿ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ/22/ಸೇಇವಿ/2007, ದಿನಾಂಕ: 11.04.2008ರ ಅನ್ವಯ, ರೂ. 8,000/–ಗಳನ್ನು (ರೂ. ಎಂಟು ಸಾವಿರಗಳು) ಸಂಚಿತ ಸಂಭಾವನೆಯನ್ನು ಹಾಗೂ ರೂ. 1500/– ವಾಹನಭತ್ಯೆಯನ್ನು ವಿಚಾರಣೆ ವರದಿಯನ್ನು ಸಲ್ಲಿಸಿದ ತಕ್ಷಣ ಪಾವತಿಸತಕ್ಕದ್ದು.

**ಹೆಚ್.ಇ. ರಾಜಶೇಖರಪ್ಪ**

ಪಿ.ಆರ್.1319

ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು**

**ಸಂಖ್ಯೆ: ಆಸಾಂನಿ/136/ಆಡಳಿತ–2/06–07(ಭಾಗ), ಬೆಂಗಳೂರು, ದಿನಾಂಕ:11ನೇ ಆಗಸ್ಟ್, 2010**

**ವಿಷಯ:** ಶ್ರೀ ಎಂ. ಷಬ್ಬೀರ್ ಅಹಮ್ಮದ್, ಅಮಾನತ್ತಿನಲ್ಲಿರುವ ಈ ನಿರ್ದೇಶನಾಲಯದ ಸಾಂಖ್ಯಿಕ ನಿರೀಕ್ಷಕರು, (ಅಮಾನತ್ತಿನಲ್ಲಿರುವ ತಕ್ಷಣದ ಪೂರ್ವದಲ್ಲಿ ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬಳ್ಳಾರಿ–ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅನಧಿಕೃತ ಗೈರು ಹಾಜರಾತಿ ಆರೋಪದ ಮೇಲೆ ಅಮಾನತ್ತುಗೊಂಡಿರುವರು) ಇವರ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸುವುದರ ಕುರಿತು.

**ಉಲ್ಲೇಖ:**
1) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ಸಂಖ್ಯೆ: ಆಡಳಿತ/389/2008–09, ದಿನಾಂಕ: 17.10.2008.
2) ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬಳ್ಳಾರಿ, ಇವರ ಕಚೇರಿ ಆದೇಶ ಸಂಖ್ಯೆ: 35/2009–10, ದಿನಾಂಕ: 20.11.2009.
3) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಕಾರಣ ಕೇಳುವ ಜ್ಞಾಪನದ ದಿನಾಂಕ: 16.12.2009.
4) ಈ ನಿರ್ದೇಶನಾಲಯದ ಅದೇಶದ ಸಂಖ್ಯೆ: ಆಡಳಿತ/014/2010–11, ದಿನಾಂಕ: 13.04.2010.
5) ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ (ಸಂದರ್ಶ ಮತ್ತು ಕಟ್ಟಡಗಳು) ಬಳ್ಳಾರಿ ವಿಭಾಗ, ಬಳ್ಳಾರಿ ಇವರ ಕಚೇರಿಯ ಪತ್ರದ ಸಂಖ್ಯೆ: ಕಾನಿಇಂ/ಲೋಇ/ಬಿವಿ/ಸಿಬಿ/ಸಿ–1/ಎಫ್–10/2009–10/3535, ದಿನಾಂಕ: 22.02.2010 ಹಾಗೂ ಆ ಪತ್ರದೊಂದಿಗೆ ಲಗತ್ತಿಸಲಾದ ದಾಖಲಾತಿಗಳು.
6) ಶ್ರೀ ಎಂ. ಷಬ್ಬೀರ್ ಅಹಮ್ಮದ್, ಅಮಾನತ್ತಿನಲ್ಲಿರುವ ಸಾಂಖ್ಯಿಕ ನಿರೀಕ್ಷಕರು, ಇವರ ಸ್ವೀಕೃತಿ ಪತ್ರಗಳು(1) ದಿನಾಂಕ: 01.02.2010 (2) ದಿನಾಂಕ: 05.05.2010.
7) ಶ್ರೀ ಎಂ. ಷಬ್ಬೀರ್ ಅಹಮ್ಮದ್, ಅಮಾನತ್ತಿನಲ್ಲಿರುವ ಸಾಂಖ್ಯಿಕ ನಿರೀಕ್ಷಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 11ರ ಅನ್ವಯ ಹೊರಡಿಸಲಾದ ಇದೇ ಕ್ರಮಾಂಕದ ಕಾರಣ ಕೇಳುವ ಜ್ಞಾಪನದ ದಿನಾಂಕ: 09.06.2010 ಹಾಗೂ ಶ್ರೀ ಎಂ. ಷಬ್ಬೀರ್ ಅಹಮ್ಮದ್, ಅಮಾನತ್ತಿನಲ್ಲಿರುವ ಸಾಂಖ್ಯಿಕ ನಿರೀಕ್ಷಕರು, ಇವರ ಸ್ವೀಕೃತಿ, ದಿನಾಂಕ: 14.06.2010.

**ಪ್ರಸ್ತಾವನೆ:**

ಶ್ರೀ ಎಂ. ಷಬ್ಬೀರ್ ಅಹಮ್ಮದ್ ಈ ನಿರ್ದೇಶನಾಲಯದ ಸಾಂಖ್ಯಿಕ ನಿರೀಕ್ಷಕರು ವೃಂದದವರಾಗಿದ್ದು, ಇವರನ್ನು, ಅವರ ಸ್ವಂತ ಕೋರಿಕೆ ಅನ್ವಯ, ಉಲ್ಲೇಖ (1)ರಲ್ಲಿನ ಅದೇಶದ ದಿನಾಂಕ: 17.10.2008ರಲ್ಲಿ ಕಾರ್ಯನಿರ್ವಾಹಕ ಅಧಿಕಾರಿಗಳ ಕಚೇರಿ, ಲೋಕೋಪಯೋಗಿ ಇಲಾಖೆ, ಬಳ್ಳಾರಿ, ಇಲ್ಲಿ ಖಾಲಿ ಇದ್ದ ಸಾಂಖ್ಯಿಕ ನಿರೀಕ್ಷಕರರ ಹುದ್ದೆಗೆ ನೇಮಕಾತಿ ಮಾಡಲಾಗಿತ್ತು. ಆ ಕಚೇರಿಯಲ್ಲಿ ಅವರು ದಿನಾಂಕ: 23.10.2008 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡ ನಂತರ, ಆ ಇಲಾಖೆಯ ಆಂತರಿಕ ಪತ್ರವ್ಯವಹಾರಗಳ ಅನ್ವಯ, ಹಾಗೂ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬಳ್ಳಾರಿ ಇವರ ಪತ್ರದ ದಿನಾಂಕ: 25.09.2009ರ ಅನ್ವಯ (ಅಡಕ–1) ಶ್ರೀ ಎಂ. ಷಬ್ಬೀರ್ ಅಹಮ್ಮದ್, ಸಾಂಖ್ಯಿಕ ನಿರೀಕ್ಷಕರು ದಿನಾಂಕ: 30.11.2008 ರಿಂದ ಅನಧಿಕೃತ ಗೈರು ಹಾಜರಾಗಿರುವುದಾಗಿ ಖಚಿತವಾಗಿದ್ದರಿಂದ ಈ ನಿರ್ದೇಶನಾಲಯದ ಪತ್ರದ ದಿನಾಂಕ: 10.11.2009ರಲ್ಲಿ ಅವರ ಅನಧಿಕೃತ ಗೈರು ಹಾಜರಾತಿಗೆ ಸಂಬಂಧಿಸಿದ್ದಂತೆ ಹಾಗೂ ಅದೇ ಸಾಂಖ್ಯಿಕ ನಿರೀಕ್ಷಕರ ಸೇವೆಗೆ ಸಂಬಂಧಿಸಿದಂತೆ, ಮಾಹಿತಿ ಒದಗಿಸುವಂತೆ, ಅಧೀಕ್ಷಕರ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬಳ್ಳಾರಿ, ಇವರನ್ನು ಕೋರಲಾಗಿತ್ತು, ಹಾಗೂ ಅದೇ ಪತ್ರದ ಪ್ರತಿಯನ್ನು ಕಾರ್ಯನಿರ್ವಾಹಕ ಅಧಿಕಾರಿಗಳು ಲೋಕೋಪಯೋಗಿ ಇಲಾಖೆ, ಬಳ್ಳಾರಿ, ಇವರಿಗೂ ಕಳುಹಿಸಲಾಗಿತ್ತು.

ಆದರೆ, ಕಾರ್ಯನಿರ್ವಾಹಕ ಅಧಿಕಾರಿಗಳು, ಲೋಕೋಪಯೋಗಿ ಇಲಾಖೆ, ಬಳ್ಳಾರಿ, ಇವರು ದಿನಾಂಕ: 30.11.2008 ರಿಂದ ಈ ಸಾಂಖ್ಯಿಕ ನಿರೀಕ್ಷಕರ ಅನಧಿಕೃತ ಗೈರು ಹಾಜರಾತಿ ಕುರಿತು ಮಾಹಿತಿ ನೀಡುವುದರ ಬದಲಾಗಿ, ಉಲ್ಲೇಖ (2)ರಲ್ಲಿನ ಅವರ ಕಚೇರಿ ಅದೇಶದ ದಿನಾಂಕ: 20.11.2009 ರಲ್ಲಿ (ಅಡಕ:2) ಅದೇ ದಿನಾಂಕದಿಂದ ಅನ್ವಯವಾಗುವಂತೆ ಈ ಸಾಂಖ್ಯಿಕ ನಿರೀಕ್ಷಕರ ಸೇವೆಯನ್ನು "ಮಾತೃ ಇಲಾಖೆಗೆ ಹಿಂತಿರುಗಿಸಿ" "ಮಾತೃ ಇಲಾಖೆಯಲ್ಲಿ ಹಾಜರಾಗುವಂತೆ ಸೂಚಿಸಿದ್ದರು", ಹಾಗೂ ಆ ಕಚೇರಿಯ ಆದೇಶವನ್ನು ಅವರ ಮನೆ ವಿಳಾಸಕ್ಕೆ ಜಾರಿ ಮಾಡಿದ್ದರು. ಆದರೆ, ಅವರನ್ನು ದಿನಾಂಕ: 20.11.2009ರ ಅಪರಾಹ್ನದಿಂದ ಆ ಕಚೇರಿಯಿಂದ ಬಿಡುಗಡೆಗೊಳಿಸಲಾಗಿದ್ದರೂ, ಮಾತೃ ಇಲಾಖೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿಲ್ಲವಾದ್ದರಿಂದ, ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿನಾಂಕ: 16.12.2009ರಲ್ಲಿ (ಅಡಕ–3), ಈ ಜ್ಞಾಪನ ತಲುಪಿದ ಒಂದುವಾರದ ಒಳಗಾಗಿ ಅವರ ಅನಧಿಕೃತ ಗೈರು ಹಾಜರಾತಿ ಕುರಿತು ವಿವರಣೆ ಸಲ್ಲಿಸುವುದರೊಂದಿಗೆ ಕೇಂದ್ರ ಕಚೇರಿಯಲ್ಲಿ (ಮಾತೃ ಇಲಾಖೆಯಲ್ಲಿ) ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು. ಈ ಜ್ಞಾಪನವನ್ನು ಅವರಿಗೆ ದಿನಾಂಕ: 08.02.2010 ರಂದು (ಸ್ವೀಕೃತಿ ಪ್ರತಿ ಅಡಕ–4 ರಲ್ಲಿದೆ), ಜಾರಿ ಮಾಡಲಾಗಿದ್ದರೂ, ಅವರು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಇದ್ದುದರಿಂದ ಸರ್ಕಾರದ ಸೇವೆಗೆ ದೀರ್ಘಕಾಲದ ವರೆಗೆ ಅನಧಿಕೃತ ಗೈರು ಹಾಜರಾಗಿ, ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966ರ ನಿಯಮ: 3 (i)(ii)(iii)ನ್ನು ಉಲ್ಲಂಘಿಸಿದ್ದರಿಂದ, ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ದಿನಾಂಕ: 13.04.2010ರಲ್ಲಿ (ಈ ಆದೇಶ ಮತ್ತು ಸ್ವೀಕೃತಿ ಅಡಕ: 5–6ರಲ್ಲಿದೆ), ಅವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಅವರ ವಿರುದ್ಧದ ಇಲಾಖಾ ವಿಚಾರಣೆಗಳಿಗೆ ಸಂಬಂಧಿಸಿದಂತೆ ಪ್ರಾರಂಭಿಕವಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು–1957ರ ಅನ್ವಯ, ಅವರ ವಿರುದ್ಧದ ದೋಷಾರೋಪಣಾ ಪಟ್ಟಿಯನ್ನು ಒಳಗೊಂಡಂತೆ ಉಲ್ಲೇಖ (7)ರಲ್ಲಿನ "ಕಾರಣ ಕೇಳಿದ ಜ್ಞಾಪನ" ನೀಡಿ, ಅದನ್ನು ಸ್ವೀಕರಿಸಿದ 15 ದಿನಗಳ ಒಳಗಾಗಿ ಅವರ ಲಿಖಿತ ವಿವರಣೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಅವರ ವಿರುದ್ಧದ ದೋಷಾರೋಪಣಾ ಪಟ್ಟಿಯನ್ನು ಈ ಕೆಳಗೆ ಪುನರುಚ್ಚರಿಸಲಾಗಿದೆ:–

**ಆರೋಪ: 1**

ಶ್ರೀ ಎಂ. ಷಬ್ಬೀರ್ ಅಹಮ್ಮದ್, ಸಾಂಖ್ಯಿಕ ನಿರೀಕ್ಷಕರಾದ (ಪ್ರಸ್ತುತ ಅಮಾನತ್ತಿನಲ್ಲಿರುವ) ನಿಮ್ಮನ್ನು ಈ ನಿರ್ದೇಶನಾಲಯದ ಆದೇಶದ ಸಂಖ್ಯೆ: ಆಡಳಿತ/389/2008–2009, ದಿನಾಂಕ 17.10.2008ರಲ್ಲಿ ನಿಮ್ಮ ಕೋರಿಕೆ ಅನ್ವಯ ಕಾರ್ಯನಿರ್ವಾಹಕ ಅಧಿಕಾರಿಗಳ ಕಚೇರಿ, ಲೋಕೋಪಯೋಗಿ ಇಲಾಖೆ, ಬಳ್ಳಾರಿ ಇಲ್ಲಿಗೆ ನೇಮಕಾತಿ ಮಾಡಲಾಗಿತ್ತು, ಈ ಆದೇಶದ ಅನ್ವಯ, ಆ ಕಚೇರಿಯಲ್ಲಿ ದಿನಾಂಕ 23.10.2008ರಂದು ಕರ್ತವ್ಯಕ್ಕೆ ವರದಿ

ಮಾಡಿಕೊಂಡಿರುತ್ತೀರಿ, ನಂತರ, ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬಳ್ಳಾರಿ ಇವರ ಪತ್ರದ ದಿನಾಂಕ 25.9.2009ರಲ್ಲಿ ಹಾಗೂ ನಂತರದ ಹಲವಾರು ಪತ್ರ ವ್ಯವಹಾರಗಳಲ್ಲಿ ನೀವು ದಿನಾಂಕ 30.11.2008 ರಿಂದ ಅನಧಿಕೃತ ಗೈರುಹಾಜರಾಗಿರುವ ಕುರಿತು ಕಂಡು ಬಂದಿದ್ದರಿಂದ, ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಪತ್ರದ ದಿನಾಂಕ 10.11.2009ರಲ್ಲಿ, ದಿನಾಂಕ 30.11.2008 ರಿಂದ ನಿಮ್ಮ ಅನಧಿಕೃತ ಗೈರುಹಾಜರಾತಿಗೆ ಸಂಬಂಧಿಸಿದಂತೆ, ಆ ಇಲಾಖೆಯು ನಿಮ್ಮ ವಿರುದ್ಧ ಕ್ರಮ ಜರುಗಿಸಿರುವ ಕುರಿತು ಮಾಹಿತಿ ಒದಗಿಸುವಂತೆ, ಹಾಗೂ, ಆ ಕಚೇರಿಯಲ್ಲಿ ನಿಮ್ಮ ಸೇವೆಗೆ ಸಂಬಂಧಿಸಿದಂತೆ ಇನ್ನಿತರ ಮಾಹಿತಿ ಒದಗಿಸುವಂತೆ ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಇವರನ್ನು ಕೋರಲಾಗಿತ್ತು. ಹಾಗೂ, ಆ ಪತ್ರದ ಪ್ರತಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಬಳ್ಳಾರಿ ಇವರಿಗೆ ಕಳುಹಿಸಲಾಗಿತ್ತು.

ಕಾರ್ಯನಿರ್ವಾಹಕ ಅಧಿಕಾರಿಗಳು, ಲೋಕೋಪಯೋಗಿ ಇಲಾಖೆ, ಬಳ್ಳಾರಿ ಇವರು ದಿನಾಂಕ 30.11.2008 ರಿಂದ ನಿಮ್ಮ ಅನಧಿಕೃತ ಗೈರುಹಾಜರಾತಿ ಕುರಿತು ಮಾಹಿತಿ ನೀಡುವುದರ ಬದಲಾಗಿ ಹಾಗೂ ನಿಮ್ಮ ಮೇಲೆ ಕ್ರಮ ಜರುಗಿಸಿದ್ದರ ಕುರಿತು ಮಾಹಿತಿ ನೀಡುವುದರ ಬದಲಾಗಿ, ದಿನಾಂಕ 20.11.2009ರ ಅವರ ಕಚೇರಿ ಆದೇಶದಲ್ಲಿ ನಿಮ್ಮನ್ನು ಅದೇ ದಿನಾಂಕ 20.11.2009 ರಿಂದ ಅನ್ವಯವಾಗುವಂತೆ ಅವರ ಕಚೇರಿಯಿಂದ ಬಿಡುಗಡೆಗೊಳಿಸಿ, ನಿಮ್ಮ ಸೇವೆಯನ್ನು "ಮಾತೃ ಇಲಾಖೆಗೆ ಹಿಂತಿರುಗಿಸಿ," " ಮಾತೃ ಇಲಾಖೆಯಲ್ಲಿ ಹಾಜರಾಗುವಂತೆ" ಸೂಚಿಸಿರುತ್ತಾರೆ. ಹಾಗೂ, ಆ ಕಚೇರಿ ಆದೇಶವನ್ನು ನಿಮ್ಮ ಮನೆ ವಿಳಾಸಕ್ಕೂ ಕಳುಹಿಸಿರುತ್ತಾರೆ. ಅದರೆ, ನಿಮ್ಮನ್ನು ದಿನಾಂಕ 20.11.2009ರ ಅಪರಾಹ್ನದಿಂದ ಆ ಕಚೇರಿಯಿಂದ ಬಿಡುಗಡೆಗೊಳಿಸಲಾಗಿದ್ದರೂ, ನೀವು ಕೇಂದ್ರ ಕಚೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿಲ್ಲವಾದ್ದರಿಂದ, ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿನಾಂಕ 16.12.2009ರಲ್ಲಿ, ಈ ಜ್ಞಾಪನ ತಲುಪಿದ ಒಂದು ವಾರದ ಒಳಗಾಗಿ ನಿಮ್ಮ ಅನಧಿಕೃತ ಗೈರುಹಾಜರಾತಿ ಕುರಿತು ವಿವರಣೆ ಸಲ್ಲಿಸುವುದರೊಂದಿಗೆ, ಕೇಂದ್ರ ಕಚೇರಿಯಲ್ಲಿ (ಮಾತೃ ಇಲಾಖೆಯಲ್ಲಿ) ಕರ್ತವ್ಯಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು. ಈ ಜ್ಞಾಪನವನ್ನು ನಿಮಗೆ ದಿನಾಂಕ 08.02.2010ರಂದು ಜಾರಿ ಮಾಡಿದ್ದರೂ, ನೀವು ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಇದ್ದುದರಿಂದ ಸರ್ಕಾರದ ಸೇವೆಗೆ ದೀರ್ಘಕಾಲದವರೆಗೆ ನೀವು ಅನಧಿಕೃತ ಗೈರುಹಾಜರಾಗಿ, ಕರ್ತವ್ಯ ಲೋಪ ಎಸಗಿದ್ದರಿಂದ ಹಾಗೂ ಕರ್ನಾಟಕ ನಾಗರಿಕ ಸೇವಾ(ನಡತೆ) ನಿಯಮಗಳು, 1966 ರ ನಿಯಮ: 3(i)(ii)(iii)ನ್ನು ಉಲ್ಲಂಘಿಸಿರುತ್ತೀರಿ. ಆದ್ದರಿಂದ, ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ದಿನಾಂಕ 13.4.2010ರಲ್ಲಿ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ನಿಮ್ಮನ್ನು ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ. ಹಾಗೂ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

ಆದರೆ, ಮೇಲೆ ತಿಳಿಸಲಾದ "ಕಾರಣ ಕೇಳುವ ಜ್ಞಾಪನವನ್ನು" ಶ್ರೀ ಎಂ. ಷಬ್ಬೀರ್ ಅಹಮ್ಮದ್, ಸಾಂಖ್ಯಿಕ ನಿರೀಕ್ಷಕರು, ದಿನಾಂಕ: 14.06.2010 ರಂದೇ ಸ್ವೀಕರಿಸಿದ್ದಾಗ್ಯೂ, ಪ್ರತಿ (ಸ್ವೀಕೃತಿ ಅಡಕ: 7 ರಲ್ಲಿದೆ) ಇಲ್ಲಿಯ ವರೆಗೂ ಅವರ ಲಿಖಿತ ವಿವರಣೆಯನ್ನು ಸಲ್ಲಿಸಿರುವುದಿಲ್ಲ.

ಆಪಾದಿತ ಸರ್ಕಾರಿ ನೌಕರರು ಅವರ ಪ್ರತಿವಾದದ ಲಿಖಿತ ಹೇಳಿಕೆಯನ್ನು ನಿಗದಿತ ಅವಧಿಯೊಳಗಾಗಿ ನಿಲ್ಲಿಸದೆ ಇದ್ದಂಥಹ ಪ್ರಕರಣಗಳಲ್ಲಿ (ಅಥವಾ ಆತನಿಂದ ಅವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ಯಾವುದೇ ರೀತಿಯ ಪ್ರತಿಕ್ರಿಯೆ ಬಾರದೆ ಇದ್ದಲ್ಲಿ), ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ನಿಯಮ: 11(5)ರ ಅನ್ವಯ "ಶಿಸ್ತು ಪ್ರಾಧಿಕಾರಿಯು ತಾನೇ ಸ್ವತಃ ಆರೋಪಗಳ ವಿಷಯಗಳ ಕುರಿತು ವಿಚಾರಣೆ ಮಾಡಬಹುದು ಅಥವಾ ವಿಚಾರಣಾ ಪ್ರಾಧಿಕಾರಿಯನ್ನು ನೇಮಿಸಬಹುದಾಗಿದೆ".

ಅಂತಿಮವಾಗಿ, ಶ್ರೀ ಎಂ. ಷಬ್ಬೀರ್ ಅಹಮ್ಮದ್, ಅಮಾನತ್ತಿನಲ್ಲಿರುವ ಸಾಂಖ್ಯಿಕ ನಿರೀಕ್ಷಕರು, ಅಮಾನತ್ತಿನಲ್ಲಿರುವ ಪೂರ್ವದಲ್ಲಿ ಅವರು ಕರ್ತವ್ಯ ನಿರ್ವಹಿಸುತ್ತಿದ್ದ ಲೋಕೋಪಯೋಗಿ ಇಲಾಖೆ, ಬಳ್ಳಾರಿ, ಇಲ್ಲಿ ದಿನಾಂಕ: 30.11.2008 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ನಂತರ ದಿನಾಂಕ: 20.11.2009 ರಿಂದ ಅನ್ವಯವಾಗುವಂತೆ ಅವರನ್ನು ಆ ಕಚೇರಿಯಿಂದ ಬಿಡುಗಡೆಗೊಳಿಸಿದ ನಂತರವೂ, ಮಾತೃ ಇಲಾಖೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಇದ್ದುದರಿಂದ, ಈ ನಿರ್ದೇಶನಾಲಯದ ಆದೇಶದ ದಿನಾಂಕ: 13.04.2010 ರಲ್ಲಿ ಅವರನ್ನು ಸರ್ಕಾರದ ಸೇವೆಯಿಂದ ಅಮಾನತ್ತು ಗೊಳಿಸಲಾಗಿತ್ತು. ನಂತರ, ಉಲ್ಲೇಖ (7)ರಲ್ಲಿ ತಿಳಿಸಲಾದ "ಕಾರಣ ಕೇಳುವ ಜ್ಞಾಪನಕ್ಕೆ" ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸದೆ ಇರುವುದನ್ನು ಪರಿಶೀಲಿಸಿ, ಶ್ರೀ ಎಂ. ಷಬ್ಬೀರ್ ಅಹಮ್ಮದ್, ಅಮಾನತ್ತಿನಲ್ಲಿರುವ ಸಾಂಖ್ಯಿಕ ನಿರೀಕ್ಷಕರು, ಇವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣಾ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 11ರಡಿಯಲ್ಲಿ ಇಲಾಖಾ ವಿಚಾರಣೆ ಏರ್ಪಡಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಚೇರಿ ಆದೇಶದ ಸಂಖ್ಯೆ: ಆಡಳಿತ/ 374/2010–11**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನಲೆಯಲ್ಲಿ ಈ ಪ್ರಕರಣದಲ್ಲಿ ಅಪಾದಿತ ಸರ್ಕಾರಿ ನೌಕರರಾದ ಶ್ರೀ ಎಂ. ಷಬ್ಬೀರ್ ಅಹಮ್ಮದ್, ಹಿಂದಿನ ಸಾಂಖ್ಯಿಕ ನಿರೀಕ್ಷಕರು, ಕಾರ್ಯಪಾಲಕ ಅಭಿಯಂತರ ಕಚೇರಿ, ಲೋಕೋಪಯೋಗಿ ಇಲಾಖೆ, ಬಳ್ಳಾರಿ, (ಪ್ರಸ್ತುತ ಅಮಾನತ್ತಿನಲ್ಲಿ) ಇವರ ವಿರುದ್ಧದ ಇಲಾಖಾ ವಿಚಾರಣೆ ಏರ್ಪಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11(5)ನ್ನು ಓದುವುದರೊಂದಿಗೆ ಅದೇ ನಿಯಮದ ಉಪ ನಿಯಮ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಜಿ. ಹಿರೇಮಠ, ನಿವೃತ್ತ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಅದೇ ನಿಯಮಗಳ ನಿಯಮ: 11ರ ಅಡಿಯಲ್ಲಿ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು 3–ತಿಂಗಳೊಳಗಾಗಿ ಸಲ್ಲಿಸುವಂತೆ ನಿರ್ದೇಶಿಸಲಾಗಿದೆ.

ಮುಂದುವರೆದು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ:11ರ ಉಪ ನಿಯಮ (5) (ಸಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಿಸ್ತು ಪ್ರಾಧಿಕಾರದ ಪರವಾಗಿ ಈ ಪ್ರಕರಣವನ್ನು ಏರ್ಪಡಿಸಲು ಶ್ರೀ ಎಂ.ಎನ್. ಚಾಕರಿ, ಸಹಾಯಕ ನಿರ್ದೇಶಕರು, (ಎ.ಆರ್.ಸಿ. ವಿಭಾಗ) ಕೇಂದ್ರ ಕಛೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು, ಈ ಪ್ರಕರಣದ ವಿಚಾರಣೆಯನ್ನು ಈ ನಿರ್ದೇಶನಾಲಯದ ಕೇಂದ್ರ ಕಚೇರಿಯಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಬಹುದಾದ ಸ್ಥಳದಲ್ಲಿ ಏರ್ಪಡಿಸಬಹುದಾಗಿರುತ್ತದೆ. ಈ ಪ್ರಕರಣದ ವಿಚಾರಣೆಗಾಗಿ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ/22/ಸೇಇವಿ/2007, ದಿನಾಂಕ: 11.04.2008ರ ಅನ್ವಯ, ರೂ. 8,000/–ಗಳನ್ನು (ರೂ. ಎಂಟು ಸಾವಿರಗಳು) ಸಂಚಿತ ಸಂಭಾವನೆಯನ್ನು ಹಾಗೂ ರೂ. 1500/– ವಾಹನಭತ್ಯೆಯನ್ನು ವಿಚಾರಣೆ ವರದಿಯನ್ನು ಸಲ್ಲಿಸಿದ ತಕ್ಷಣ ಪಾವತಿಸತಕ್ಕದ್ದು.

**ಹೆಚ್.ಇ. ರಾಜಶೇಖರಪ್ಪ**

ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

ಪಿ.ಆರ್.1295

**URBAN DEVELOPMENT DEPARTMENT**

**NOTIFICATION**

**No.UDD/397/MNX/2010, Bangalore, Dated:25th August, 2010**

In exercise of the powers conferred by sub-section(1) of Section-48 of the Land Acquisition Act-1894 (Central Act-1894) the Government of Karnataka hereby withdrawn from the acquisition the lands specified below in respect of which the Preliminary Notification was published in the Karnataka Gazette dated:15-12-1988 pages 362 to 378 and dated:29.12.1988 pages 399 to 414 vide Notification No.BDA/ALAO/A1/PR/117 and Final Notification No.HUD 334 MNX 1990 dated:03.11.1990 was published in the Karnataka Gazette Dated:20.11.1990 under sub-section(1) of Section-19 of BDA Act 1976 (Karnataka Act-12 of 1976) for formation of layout Called "BYRASANDRA TAVAREKERE MADIVALA IV STAGE LAYOUT".

**SCHEDULE**

**DISTRICT:BANGALORE** **TALUK:BANGALORE-SOUTH** **HOBLI:BEGUR** **VILLAGE:DEVARACHIKKANAHALLI**

| Sl. No. | Name of the Khatedar/Anubhavadar Sri/Smt. | Sy. No. | Dry/ Wet/ Garden | Total Extent | Kharab | Remaining Extent | Assessment | Extent Acquired | Extent with drawn | Boundaries | | | |
|---|---|---|---|---|---|---|---|---|---|---|---|---|---|
| | | | | A-G | A-G | A-G | Rs.Ps. | A.G. | A-G | North Sy.No | South Sy. No | East Sy.No | West Sy.No |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| 1. | P. Narayana Navade,<br>P. Meenakshi | 15/1 | Dry | 1-09 | 0-02 | 1-07 | 1-87 | 1-09 | **1-09** | Village | 15/2 | 15/3 | 27 |
| | **Total Extent With drawn** | | | | | | | | **1-09** | | | | |

**TOTAL EXTENT WITH DRAWN 01 Acres and 09 Guntas (One Acres and Nine Guntas Only)**

By Order and in the name of the Governor of Karnataka,

**M.S.PREMACHANDRA**

Under Secretary to Government,

Urban Development Department.

PR-1332

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಮತ್ತು ಜಿಲ್ಲಾ ಚುನಾವಣಾಧಿಕಾರಿಗಳ ರವರ ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ : ಚುನಾ (ಗ್ರಾ.ಪಂ)ಸಿಆರ್/34/09–10, ದಿನಾಂಕ:5ನೇ ಆಗಸ್ಟ್, 2010**

ಕರ್ನಾಟಕ ಪಂಚಾಯತ್ ರಾಜ್ ಕಾಯಿದೆ 1993 ರ ಕಲಂ 44 [2]ನೇ ಉಪ ಪ್ರಕರಣದಂತೆ ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ: ರಾಚುಆ:155:ಇಜಿಪಿ:2010 ದಿನಾಂಕ: 14–05–10 ಮತ್ತು 18–05–2010 ರ ಅನ್ವಯ ಬೆಂಗಳೂರು ಜಿಲ್ಲೆ, **ಬೆಂಗಳೂರು ದಕ್ಷಿಣ ತಾಲ್ಲೂಕಿನ 15** ಗ್ರಾಮ ಪಂಚಾಯಿತಿಗಳಿಗೆ 2010 ನೇ ಸಾಲಿನ ಮೊದಲನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿಯನ್ನು ನಿಗದಿ ಪಡಿಸಲಾಗಿದ್ದು, ವಿವಿಧ ಹಂತಗಳಲ್ಲಿ ಸದರಿ ತಾಲ್ಲೂಕಿನ ಗ್ರಾಮ ಪಂಚಾಯಿತಿಗಳ ಕೇಂದ್ರ ಸ್ಥಾನಗಳಲ್ಲಿ ನಿಗದಿಪಡಿಸಿದ ದಿನಾಂಕದಂದು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಚುನಾವಣೆ ನಡೆಸಿದ್ದು, ಚುನಾಯಿತರಾದ ಅಧ್ಯಕ್ಷ/ಉಪಾಧ್ಯಕ್ಷರ ಹೆಸರು ಮತ್ತು ವಿಳಾಸಗಳನ್ನು ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ.

ಬೆಂಗಳೂರು ಪೂರ್ವ ತಾಲ್ಲೂಕು ಗ್ರಾಮ ಪಂಚಾಯಿತಿ ಅಧ್ಯಕ್ಷ/ಉಪಾಧ್ಯಕ್ಷರ ಹೆಸರು ಮತ್ತು ವಿಳಾಸಗಳ ವಿವರ:

**ಬೆಂಗಳೂರು ದಕ್ಷಿಣ ತಾಲ್ಲೂಕು**

| ಕ್ರ ಸಂ. | ಗ್ರಾಮ ಪಂಚಾಯಿತಿ ಹೆಸರು | ಹೆಸರು ಶ್ರೀ/ಶ್ರೀಮತಿ | ಹುದ್ದೆ | ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ |
|---|---|---|---|---|
| 1 | 1–ತಾವರೆಕೆರೆ | **ಟಿ.ಸಿ. ಮಂಜುನಾಥ್**<br>ತಾವರೆಕೆರೆ, ಬೆಂಗಳೂರು ದಕ್ಷಿಣ ತಾಲ್ಲೂಕು. | ಅಧ್ಯಕ್ಷರು | ಹಿಂದುಳಿದ "ಬ" ವರ್ಗ |
| | 1–ತಾವರೆಕೆರೆ | **ನಾಗವೇಣಿ ಹೆಚ್.**<br>ತಾವರೆಕೆರೆ, ಬೆಂಗಳೂರು ದಕ್ಷಿಣ ತಾಲ್ಲೂಕು. | ಉಪಾಧ್ಯಕ್ಷರು | ಸಾಮಾನ್ಯ [ಮಹಿಳೆ] |
| 2 | 2–ಚೋಳನಾಯಕನಹಳ್ಳಿ | **ಎಸ್.ಟಿ.ಕುಬೇರಸ್ವಾಮಿ**<br>ದೇವ ಮಾಚೋಹಳ್ಳಿ, | ಅಧ್ಯಕ್ಷರು | ಸಾಮಾನ್ಯ |
| | 2–ಚೋಳನಾಯಕನಹಳ್ಳಿ | **ಕೃಷ್ಣಾ .ಟಿ.**<br>ತಿಪ್ಪಗೊಂಡನಹಳ್ಳಿ | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ |
| 3 | 3–ಚಿಕ್ಕನಹಳ್ಳಿ | **ಗೋವಿಂದರಾಜು**<br>ಕೂಡುಸಿದ್ದನ ಪಾಳ್ಯ ತಾವರೆಕೆರೆ ಹೋಬಳಿ. | ಅಧ್ಯಕ್ಷರು | ಪರಿಶಿಷ್ಟ ಜಾತಿ |
| | 3–ಚಿಕ್ಕನಹಳ್ಳಿ | **ಬಿ. ಬಸವರಾಜು**<br>ಸೂಲಿವಾರ ತಾವರೆಕೆರೆ ಹೋಬಳಿ. | ಉಪಾಧ್ಯಕ್ಷರು | ಹಿಂದುಳಿದ "ಬ" ವರ್ಗ |
| 4 | 4–ಚುಂಚನಕುಪ್ಪೆ | **ಮುನಿರತ್ನಮ್ಮ**<br>ಚುಂಚನಕುಪ್ಪೆ, ತಾವರೆಕೆರೆ ಹೋಬಳಿ. | ಅಧ್ಯಕ್ಷರು | ಪರಿಶಿಷ್ಟ ಜಾತಿ [ಮಹಿಳೆ] |
| | 4–ಚುಂಚನಕುಪ್ಪೆ | **ಲಕ್ಷ್ಮೀದೇವಿ**<br>ಕೋಲೂರು, ತಾವರೆಕೆರೆ ಹೋಬಳಿ. | ಉಪಾಧ್ಯಕ್ಷರು | ಸಾಮಾನ್ಯ |
| 5 | 5–ಕುಂಬಳಗೋಡು | **ಗೋಪಾಲಕೃಷ್ಣ [ಗೋಪಿ]**<br>ಕುಂಬಳಗೋಡು ಅಂಚೆ, ಕೆಂಗೇರಿ ಹೋಬಳಿ, ಬೆಂ. ದ. ತಾ. | ಅಧ್ಯಕ್ಷರು | ಹಿಂದುಳಿದ "ಅ" ವರ್ಗ |
| | 5–ಕುಂಬಳಗೋಡು | **ಸಹೀದಾ ಬಾನು**<br>ಕಂಬೀಪುರ, ಕುಂಬಳಗೋಡು ಅಂಚೆ, ಕೆಂಗೇರಿ ಹೋಬಳಿ, ಬೆಂ.ದ.ತಾ. | ಉಪಾಧ್ಯಕ್ಷರು | ಸಾಮಾನ್ಯ [ಮಹಿಳೆ] |
| 6 | 6–ರಾಮೋಹಳ್ಳಿ | **ಹೆಚ್.ವಿಜಯಲಕ್ಷ್ಮೀ**<br>ಮಾರಗೊಂಡನಹಳ್ಳಿ, ಕೆಂಗೇರಿ ಹೋಬಳಿ, ಬೆಂ. ದ. ತಾ. | ಅಧ್ಯಕ್ಷರು | ಹಿಂದುಳಿದ "ಅ" ವರ್ಗ[ಮಹಿಳೆ] |
| | 6–ರಾಮೋಹಳ್ಳಿ | **ಕೆ.ತಿಮ್ಮಯ್ಯ**<br>ಮಾಳಿಗೊಂಡನಹಳ್ಳಿ, ರಾಮೋಹಳ್ಳಿ ಅಂಚೆ, ಕೆಂಗೇರಿ ಹೋಬಳಿ, ಬೆಂ.ದ.ತಾ | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ |

| ಕ್ರ. ಸಂ. | ಗ್ರಾಮ ಪಂಚಾಯಿತಿ ಹೆಸರು | ಹೆಸರು ಶ್ರೀ/ಶ್ರೀಮತಿ | ಹುದ್ದೆ | ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ |
|---|---|---|---|---|
| 7 | 7–ಕೆ.ಗೊಲ್ಲಹಳ್ಳಿ | **ಕೆ.ಎಂ.ರಾಮಚಂದ್ರ** | ಅಧ್ಯಕ್ಷರು | ಸಾಮಾನ್ಯ |
| | 7–ಕೆ.ಗೊಲ್ಲಹಳ್ಳಿ | **ಜಿ. ಸಂಜೀವಯ್ಯ** ಚಿನ್ನಕುರ್ಚಿ, ಗೋಣಿಪುರ. | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ |
| 8 | 8–ಸೂಲಿಕೆರೆ | **ಖಾಲಿ** | ಅಧ್ಯಕ್ಷರು | ಸಾಮಾನ್ಯ [ಮಹಿಳೆ] |
| | 8–ಸೂಲಿಕೆರೆ | **ಕೆ.ವಿ.ಮಾರೇಗೌಡ** ರಾಮಸಂದ್ರ | ಉಪಾಧ್ಯಕ್ಷರು | ಸಾಮಾನ್ಯ |
| 9 | 9–ಹೆಚ್.ಗೊಲ್ಲಹಳ್ಳಿ | **ಈರಯ್ಯ** ನಂ.24, ಹೆಚ್.ಗೊಲ್ಲಹಳ್ಳಿ, ವಿದ್ಯಾಪೀಠ ಅಂಚೆ, ಕೆಂಗೇರಿ ಹೋಬಳಿ, ಬೆಂ–60 | ಅಧ್ಯಕ್ಷರು | ಸಾಮಾನ್ಯ |
| | 9–ಹೆಚ್.ಗೊಲ್ಲಹಳ್ಳಿ | **ಎನ್.ವಜ್ರಮ್ಮ** ರಾಚನಮಡು, ತಾತಾಗುಣಿ ಅಂಚೆ, ಕೆಂಗೇರಿ ಹೋಬಳಿ, ಬೆಂ–62 | ಉಪಾಧ್ಯಕ್ಷರು | ಪರಿಶಿಷ್ಟ ಪಂಗಡ |
| 10 | 10–ಅಗರ | **ಅರುಣ** ತಾತಾಗುಣಿ ಅಂಚೆ, ಕೆಂಗೇರಿ ಹೋಬಳಿ, ಬೆಂ.ದ.ತಾ. | ಅಧ್ಯಕ್ಷರು | ಹಿಂದುಳಿದ "ಅ" ವರ್ಗ [ಮಹಿಳೆ] |
| | 10–ಅಗರ | **ರಂಗರಾಜು** ಅಗರ, ತಾತಾಗುಣಿ ಅಂಚೆ, ಕೆಂಗೇರಿ ಹೋಬಳಿ, ಬೆಂ.ದ.ತಾ | ಉಪಾಧ್ಯಕ್ಷರು | ಸಾಮಾನ್ಯ |
| 11 | 11–ತರಳು | **ಮಾದಮ್ಮ** ತರಳು ಗ್ರಾಮ, ತರಳು ಅಂಚೆ, ಉತ್ತರಹಳ್ಳಿ ಹೋಬಳಿ, ಬೆಂ.ದ.ತಾ. | ಅಧ್ಯಕ್ಷರು | ಪರಿಶಿಷ್ಟ ಪಂಗಡ |
| | 11–ತರಳು | **ಮಂಗಳ** ಗುಳಿಕ ಮಲೆ ಗ್ರಾಮ, ತರಳು ಗ್ರಾಮ, ತರಳು ಅಂಚೆ, ಉತ್ತರಹಳ್ಳಿ ಹೋಬಳಿ, ಬೆಂ.ದ.ತಾ. | ಉಪಾಧ್ಯಕ್ಷರು | ಹಿಂದುಳಿದ "ಅ" ವರ್ಗ [ಮಹಿಳೆ] |
| 12 | 12–ಸೋಮನಹಳ್ಳಿ | **ಮುನಿಕಾಳಪ್ಪ** ನೆಲಗುಳಿ, ಉತರಹಳ್ಳಿ ಹೋಬಳಿ, ಬೆಂ.ದ.ತಾ. | ಅಧ್ಯಕ್ಷರು | ಪರಿಶಿಷ್ಟ ಜಾತಿ |
| | 12–ಸೋಮನಹಳ್ಳಿ | **ಶಿವರತ್ನ ಕೊಂ ಚೆಲುವಮೂರ್ತಿ** ನೆಟ್ಟಿಗೆರೆ, ಬೋಳರೆ ಅಂಚೆ, ಬೆಂ.ದ.ತಾ | ಉಪಾಧ್ಯಕ್ಷರು | ಹಿಂದುಳಿದ "ಅ" ವರ್ಗ [ಮಹಿಳೆ] |
| 13 | 13–ಕಗ್ಗಲೀಪುರ | **ಜಯಮ್ಮ** ಕಗ್ಗಲೀಪುರ, ಉತ್ತರಹಳ್ಳಿ ಹೋಬಳಿ, ಬೆಂ.ದ.ತಾ. | ಅಧ್ಯಕ್ಷರು | ಸಾಮಾನ್ಯ [ಮಹಿಳೆ] |
| | 13–ಕಗ್ಗಲೀಪುರ | **ಪರ್ವೀಜ್ ಅಹ್ಮದ್** ಕಗ್ಗಲೀಪುರ, ಉತ್ತರಹಳ್ಳಿ ಹೋಬಳಿ, ಬೆಂ.ದ.ತಾ. | ಉಪಾಧ್ಯಕ್ಷರು | ಹಿಂದುಳಿದ "ಅ" ವರ್ಗ |
| 14 | 14–ಕೋನಪ್ಪನ ಅಗ್ರಹಾರ | **ಕೆ.ಆರ್.ಶಂಕರ್,** ಕೋನಪ್ಪನ ಅಗ್ರಹಾರ, ಬೇಗೂರು ಹೋಬಳಿ, ಬೆಂ.ದ.ತಾ. | ಅಧ್ಯಕ್ಷರು | ಹಿಂದುಳಿದ "ಅ" ವರ್ಗ |
| | 14–ಕೋನಪ್ಪನ ಅಗ್ರಹಾರ | **ಸರಸ್ವತಿ** ದೊಡ್ಡನಾಗಮಂಗಲ, ಬೇಗೂರು ಹೋಬಳಿ, ಬೆಂ.ದ.ತಾ. | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ [ಮಹಿಳೆ] |

| ಕ್ರ. ಸಂ. | ಗ್ರಾಮ ಪಂಚಾಯಿತಿ ಹೆಸರು | ಹೆಸರು ಶ್ರೀ/ಶ್ರೀಮತಿ | ಹುದ್ದೆ | ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ |
|---|---|---|---|---|
| 15 | 15–ದೊಡ್ಡತೋಗೂರು | **ವಿ.ಬಜ್ಜಪ್ಪ**<br>ದೊಡ್ಡತೋಗೂರು, ಎಲೆಕ್ಟ್ರಾನಿಕ್ ಸಿಟಿ ಅಂಚೆ, ಬೇಗೂರು ಹೋಬಳಿ, ಬೆಂ–100. | ಅಧ್ಯಕ್ಷರು | ಪರಿಶಿಷ್ಟ ಜಾತಿ |
| | 15–ದೊಡ್ಡತೋಗೂರು | **ಸಯ್ಯದ್**<br>ಮೈಲಸಂದ್ರ, ಬೇಗೂರು ಅಂಚೆ, ಬೇಗೂರು ಹೋಬಳಿ, ಬೆಂ–68. | ಉಪಾಧ್ಯಕ್ಷರು | ಹಿಂದುಳಿದ "ಅ" ವರ್ಗ |

**ಎಂ.ಕೆ. ಅಯ್ಯಪ್ಪ**

ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾದಿಕಾರಿಗಳ ಕಾರ್ಯಾಲಯ, ಮತ್ತು ಜಿಲ್ಲಾ ಚುನಾವಣಾಧಿಕಾರಿಗಳ ರವರ ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ : ಚುನಾ (ಗ್ರಾ.ಪಂ)ಸಿಆರ್/34/09–10, ದಿನಾಂಕ:5ನೇ ಆಗಸ್ಟ್, 2010**

ಕರ್ನಾಟಕ ಪಂಚಾಯತ್ ರಾಜ್ ಕಾಯಿದೆ 1993 ರ ಕಲಂ 44 [2]ನೇ ಉಪ ಪ್ರಕರಣದಂತೆ ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ: ರಾಚುಆ:155:ಇಜಿಪಿ:2010 ದಿನಾಂಕ: 14–05–10 ಮತ್ತು 18–05–2010 ರ ಅನ್ವಯ ಬೆಂಗಳೂರು ಜಿಲ್ಲೆ, **ಬೆಂಗಳೂರು ಉತ್ತರ ತಾಲ್ಲೂಕಿನ 12** ಗ್ರಾಮ ಪಂಚಾಯಿತಿಗಳಿಗೆ 2010 ನೇ ಸಾಲಿನ ಮೊದಲನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿಯನ್ನು ನಿಗದಿ ಪಡಿಸಲಾಗಿದ್ದು, ವಿವಿಧ ಹಂತಗಳಲ್ಲಿ ಸದರಿ ತಾಲ್ಲೂಕಿನ ಗ್ರಾಮ ಪಂಚಾಯಿತಿಗಳ ಕೇಂದ್ರ ಸ್ಥಾನಗಳಲ್ಲಿ ನಿಗದಿಪಡಿಸಿದ ದಿನಾಂಕದಂದು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಚುನಾವಣೆ ನಡೆಸಿದ್ದು, ಚುನಾಯಿತರಾದ ಅಧ್ಯಕ್ಷ/ಉಪಾಧ್ಯಕ್ಷರ ಹೆಸರು ಮತ್ತು ವಿಳಾಸಗಳನ್ನು ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ.

ಬೆಂಗಳೂರು ಪೂರ್ವ ತಾಲ್ಲೂಕು ಗ್ರಾಮ ಪಂಚಾಯಿತಿ ಅಧ್ಯಕ್ಷ/ಉಪಾಧ್ಯಕ್ಷರ ಹೆಸರು ಮತ್ತು ವಿಳಾಸಗಳ ವಿವರ:

**ಬೆಂಗಳೂರು ಉತ್ತರ ತಾಲ್ಲೂಕು**

| ಕ್ರ. ಸಂ. | ಗ್ರಾಮ ಪಂಚಾಯಿತಿ ಹೆಸರು | ಹೆಸರು ಶ್ರೀ/ಶ್ರೀಮತಿ | ಹುದ್ದೆ | ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ |
|---|---|---|---|---|
| 1 | ಮಾದಾವಾರ | **ಗಂಗರಾಜು**<br>ತೋಟದ ಗುಡ್ಡದಹಳ್ಳಿ, ದಾಸನಪುರ ಹೋಬಳಿ, ಬೆಂಗಳೂರು. | ಅಧ್ಯಕ್ಷರು | ಹಿಂದುಳಿದ "ಬ" ವರ್ಗ |
| | ಮಾದಾವಾರ | **ಪದ್ಮಾವತಿ. ಆರ್.**<br>ಚಿಕ್ಕಬಿದರಕಲ್ಲು, ದಾಸನಪುರ ಹೋಬಳಿ. ಬೆಂಗಳೂರು ಉತ್ತರ ತಾಲ್ಲೂಕು. | ಉಪಾಧ್ಯಕ್ಷರು | ಸಾಮಾನ್ಯ ಮಹಿಳೆ |
| 2 | ಆಲೂರು | **ನೀಲಮ್ಮ**<br>ಆಲೂರು, ದಾಸನಪುರ ಹೋಬಳಿ. | ಅಧ್ಯಕ್ಷರು | ಪರಿಶಿಷ್ಟ ಜಾತಿ [ಮಹಿಳೆ] |
| | ಅಲೂರು | **ಹೆಚ್.ಎಸ್.ನಾರಾಯಣಸ್ವಾಮಿ**<br>ಹೆಗ್ಗಡದೇವನಪುರ, ದಾಸನಪುರ ಹೋಬಳಿ. | ಉಪಾಧ್ಯಕ್ಷರು | ಸಾಮಾನ್ಯ |
| 3 | ಸೋಮಶೆಟ್ಟಿಹಳ್ಳಿ | **ಚಿಕ್ಕಬೈಲಪ್ಪ**<br>ಲಕ್ಷ್ಮೀಪುರ, ಯಶವಂತಪುರ ಹೋಬಳಿ. | ಅಧ್ಯಕ್ಷರು | ಸಾಮಾನ್ಯ |
| | ಸೋಮಶೆಟ್ಟಿಹಳ್ಳಿ | **ಸುಮಾ**<br>ಸೋಮಶೆಟ್ಟಿಹಳ್ಳಿ, ಯಶವಂತಪುರ ಹೋಬಳಿ. | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ [ಮಹಿಳೆ] |
| 4 | ಗೋಪಾಲಪುರ | **ರಾಮಸ್ವಾಮಿ. ವಿ**<br>ಗೋಪಾಲಪುರ, ದಾಸನಪುರ ಹೋಬಳಿ. | ಅಧ್ಯಕ್ಷರು | ಸಾಮಾನ್ಯ |

| ಕ್ರ. ಸಂ. | ಗ್ರಾಮ ಪಂಚಾಯಿತಿ ಹೆಸರು | ಹೆಸರು ಶ್ರೀ/ಶ್ರೀಮತಿ | ಹುದ್ದೆ | ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ |
|---|---|---|---|---|
| | ಗೋಪಾಲಪುರ | **ಸೌಭಾಗ್ಯ**<br>ಹೊಸಹಳ್ಳಿ ಪಾಳ್ಯ, ಗೋಪಾಲಪುರ ದಾಸನಪುರ ಹೋಬಳಿ. | ಉಪಾಧ್ಯಕ್ಷರು | ಪರಿಶಿಷ್ಟ ಪಂಗಡ [ಮಹಿಳೆ] |
| 5 | ಕೊಡಿಗೇಹಳ್ಳಿ | **ಎಸ್.ನಂಜುಂಡೇಶ್**<br>ಕೊಡಿಗೇಹಳ್ಳಿ ಯಶವಂತಪುರ ಹೋಬಳಿ. | ಅಧ್ಯಕ್ಷರು | ಸಾಮಾನ್ಯ |
| | ಕೊಡಿಗೇಹಳ್ಳಿ | **ಗೌರಮ್ಮ**<br>ಸಿಗೇಹಳ್ಳಿ, ಸೂಲಿಕೆರೆ ಅಂಚೆ, ಯಶವಂತಪುರ ಹೋಬಳಿ. | ಉಪಾಧ್ಯಕ್ಷರು | ಸಾಮಾನ್ಯ [ಮಹಿಳೆ] |
| 6 | ಮಾದನಾಯಕನಹಳ್ಳಿ | **ಚಂದ್ರಮ್ಮ**<br>ಮಾದನಾಯಕನಹಳ್ಳಿ, ದಾಸನಪುರ ಹೋಬಳಿ. | ಅಧ್ಯಕ್ಷರು | ಸಾಮಾನ್ಯ [ಮಹಿಳೆ] |
| | ಮಾದನಾಯಕನಹಳ್ಳಿ | **ವಿ.ಬಾಲಾಜಿ ಸಿಂಗ್**<br>ಮಾದನಾಯಕನಹಳ್ಳಿ, ದಾಸನಪುರ ಹೋಬಳಿ. | ಉಪಾಧ್ಯಕ್ಷರು | ಹಿಂದುಳಿದ "ಅ" ವರ್ಗ |
| 7 | ಸೊಂಡೆಕೊಪ್ಪ | **ಎನ್.ಪಿ. ರಾಮಯ್ಯ**<br>ಸೊಂಡೆಕೊಪ್ಪ, ದಾಸನಪುರ ಹೋಬಳಿ. | ಅಧ್ಯಕ್ಷರು | ಪರಿಶಿಷ್ಟ ಜಾತಿ |
| | ಸೊಂಡೆಕೊಪ್ಪ | **ನಾಗಮ್ಮ**<br>ಹುಲ್ಲೇಗೌಡನಹಳ್ಳಿ, ದಾಸನಪುರ ಹೋಬಳಿ. | ಉಪಾಧ್ಯಕ್ಷರು | ಹಿಂದುಳಿದ "ಅ" ವರ್ಗ[ಮಹಿಳೆ] |
| 8 | ಹುಸ್ಕೂರು | **ಲಕ್ಷ್ಮಮ್ಮ**<br>ಬೆತ್ತನಗೆರೆ, ದಾಸನಪುರ ಹೋಬಳಿ. | ಅಧ್ಯಕ್ಷರು | ಸಾಮಾನ್ಯ [ಮಹಿಳೆ] |
| | ಹುಸ್ಕೂರು | **ಎನ್.ಆರ್.ಮಂಜುಳ**<br>ಮತ್ತಹಳ್ಳಿ, ದಾಸನಪುರ ಹೋಬಳಿ. | ಉಪಾಧ್ಯಕ್ಷರು | ಹಿಂದುಳಿದ "ಅ" ವರ್ಗ [ಮಹಿಳೆ] |
| 9 | ಚಿಕ್ಕಬಾಣಾವಾರ | **ಮಹಮದ್ ಕಬೀರ್ ಅಹಮದ್**<br>ಚಿಕ್ಕಬಾಣಾವಾರ, ಬೆಂಗಳೂರು–90 | ಅಧ್ಯಕ್ಷರು | ಸಾಮಾನ್ಯ |
| | ಚಿಕ್ಕಬಾಣಾವಾರ | **ಅನೀಲ್ ಕುಮಾರ್**<br>ಚಿಕ್ಕಬಾಣಾವಾರ ಬೆಂಗಳೂರು–90 | ಉಪಾಧ್ಯಕ್ಷರು | ಸಾಮಾನ್ಯ |
| 10 | ದಾಸನಪುರ | **ರಾಧ**<br>ಅಡಕಮಾರನಹಳ್ಳಿ ಗ್ರಾಮ, ಮಾಕಳಿ ಅಂಚೆ, ದಾಸನಪುರ ಹೋಬಳಿ. | ಅಧ್ಯಕ್ಷರು | ಹಿಂದುಳಿದ "ಅ" ವರ್ಗ [ಮಹಿಳೆ] |
| | ದಾಸನಪುರ | **ವೆಂಕಟೇಶ್**<br>ದಾಸನಪುರ ಅಂಚೆ, ದಾಸನಪುರ ಹೋಬಳಿ. | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ |
| 11 | ಕಿತ್ತನಹಳ್ಳಿ | **ಡಿ.ರವಿ**<br>ಕಿತ್ತನಹಳ್ಳಿ ದಾಸನಪುರ ಹೋಬಳಿ. | ಅಧ್ಯಕ್ಷರು | ಹಿಂದುಳಿದ "ಬ" ವರ್ಗ |
| | ಕಿತ್ತನಹಳ್ಳಿ | **ಖಾಲಿ** | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ |
| 12 | ಮಾಚೋಹಳ್ಳಿ | **ಕೆ.ರಮೇಶ್ ***<br>ಕಡಬಗೆರೆ ದಾಸನಪುರ ಹೋಬಳಿ. | ಅಧ್ಯಕ್ಷರು | ಹಿಂದುಳಿದ "ಅ" ವರ್ಗ * |

| ಕ್ರ. ಸಂ. | ಗ್ರಾಮ ಪಂಚಾಯಿತಿ ಹೆಸರು | ಹೆಸರು ಶ್ರೀ/ಶ್ರೀಮತಿ | ಹುದ್ದೆ | ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ |
|---|---|---|---|---|
| | ಮಾಚೋಹಳ್ಳಿ | **ಲೀಲಾವತಿ**<br>ಮಾಚೋಹಳ್ಳಿ, ದಾಸನಪುರ ಹೋಬಳಿ. | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ [ಮಹಿಳೆ] |

**ಷರಾ:** ಈ ಮೀಸಲಾತಿ ಸ್ಥಾನಕ್ಕೆ ಹಿಂದುಳಿದ "ಅ" ವರ್ಗದ ಯಾರೋಬ್ಬರು ಸ್ಪರ್ಧಿಸಲಿಲ್ಲ. ಪ್ರಯುಕ್ತ, ಶ್ರೀ. ಕೆ.ರಮೇಶ್ ಇವರು ಹಿಂದುಳಿದ "ಬ" ವರ್ಗದವರಾಗಿದ್ದು, ಸ್ಪರ್ಧಿಸಿ ಚುನಾಯಿತರಾಗಿದ್ದಾರೆ.

**ಎಂ.ಕೆ. ಅಯ್ಯಪ್ಪ**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾದಿಕಾರಿಗಳ ಕಾರ್ಯಾಲಯ, ಮತ್ತು ಜಿಲ್ಲಾ ಚುನಾವಣಾಧಿಕಾರಿಗಳ ರವರ ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ : ಚುನಾ (ಗ್ರಾ.ಪಂ)ಸಿಆರ್/34/09–10, ದಿನಾಂಕ:5ನೇ ಆಗಸ್ಟ್, 2010**

ಕರ್ನಾಟಕ ಪಂಚಾಯತ್ ರಾಜ್ ಕಾಯಿದೆ 1993 ರ ಕಲಂ 44 [2]ನೇ ಉಪ ಪ್ರಕರಣದಂತೆ ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ: ರಾಚುಆ:155:ಇಜಿಪಿ:2010 ದಿನಾಂಕ: 14–05–10 ಮತ್ತು 18–05–10 ರ ಅನ್ವಯ ಬೆಂಗಳೂರು ಜಿಲ್ಲೆ, **ಬೆಂಗಳೂರು ಪೂರ್ವ ತಾಲ್ಲೂಕಿನ 09** ಗ್ರಾಮ ಪಂಚಾಯಿತಿಗಳಿಗೆ 2010 ನೇ ಸಾಲಿನ ಮೊದಲನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿಯನ್ನು ನಿಗದಿ ಪಡಿಸಲಾಗಿದ್ದು, ವಿವಿಧ ಹಂತಗಳಲ್ಲಿ ಸದರಿ ತಾಲ್ಲೂಕಿನ ಗ್ರಾಮ ಪಂಚಾಯಿತಿಗಳ ಕೇಂದ್ರ ಸ್ಥಾನಗಳಲ್ಲಿ ನಿಗದಿಪಡಿಸಿದ ದಿನಾಂಕದಂದು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಚುನಾವಣೆ ನಡೆಸಿದ್ದು, ಚುನಾಯಿತರಾದ ಅಧ್ಯಕ್ಷ/ಉಪಾಧ್ಯಕ್ಷರ ಹೆಸರು ಮತ್ತು ವಿಳಾಸಗಳನ್ನು ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ.

ಬೆಂಗಳೂರು ಪೂರ್ವ ತಾಲ್ಲೂಕು ಗ್ರಾಮ ಪಂಚಾಯಿತಿ ಅಧ್ಯಕ್ಷ/ಉಪಾಧ್ಯಕ್ಷರ ಹೆಸರು ಮತ್ತು ವಿಳಾಸಗಳ ವಿವರ:

**ಬೆಂಗಳೂರು ಪೂರ್ವ ತಾಲ್ಲೂಕು.**

| ಕ್ರ. ಸಂ. | ಗ್ರಾಮ ಪಂಚಾಯಿತಿಯ ಹೆಸರು | ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಹುದ್ದೆ | ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ |
|---|---|---|---|---|
| 1 | ಆವಲಹಳ್ಳಿ | **ರಾಜಮ್ಮ**<br>ಕುರುಡು ಸೊಣ್ಣೇನಹಳ್ಳಿ,<br>ವಿರ್ಗೋನಗರ ಅಂಚೆ ಬೆಂಗಳೂರು–560049 | ಅಧ್ಯಕ್ಷರು | ಪರಿಶಿಷ್ಟ ಜಾತಿ |
| | ಆವಲಹಳ್ಳಿ | **ಕಾಂತಮ್ಮ**<br>ಕಿತ್ತಗನೂರು, ಕೆ.ಆರ್.ಪುರಂ ಅಂಚೆ,<br>ಬೆಂಗಳೂರು–560036 | ಉಪಾಧ್ಯಕ್ಷರು | ಸಾಮಾನ್ಯ [ಮಹಿಳೆ] |
| 2 | ದೊಡ್ಡಬನಹಳ್ಳಿ | **ನಾರಾಯಣಮ್ಮ**<br>ಕಾಟಂನಲ್ಲೂರು ಕ್ಷೇತ್ರ | ಅಧ್ಯಕ್ಷರು | ಪರಿಶಿಷ್ಟ ಜಾತಿ[ಮಹಿಳೆ] |
| | ದೊಡ್ಡಬನಹಳ್ಳಿ | **ಎಸ್. ನಾಗರಾಜ್**<br>ಖಾಜಿ ಸೊಣ್ಣೇನಹಳ್ಳಿ ಕ್ಷೇತ್ರ | ಉಪಾಧ್ಯಕ್ಷರು | ಸಾಮಾನ್ಯ |
| 3 | ಶಿಗೇಹಳ್ಳಿ | **ಕೆ.ಸಿ. ಸವಿತ**<br>ಶೀಗೇಹಳ್ಳಿ ಕ್ಷೇತ್ರ | ಅಧ್ಯಕ್ಷರು | ಸಾಮಾನ್ಯ [ಮಹಿಳೆ] |
| | ಶಿಗೇಹಳ್ಳಿ | **ಕೆಂಪೇಗೌಡ**<br>ಕನ್ನಮಂಗಲ ಕ್ಷೇತ್ರ | ಉಪಾಧ್ಯಕ್ಷರು | ಹಿಂದುಳಿದ ವರ್ಗ [ಬ] |
| 4 | ಕೊಡತಿ | **ಎಸ್.ಇ. ರಮೇಶ್**<br>ಸೂಲಿಕುಂಟೆ ಕಾರ್ಮಲರಾಂ ಅಂಚೆ ವರ್ತೂರು<br>ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು. | ಅಧ್ಯಕ್ಷರು | ಹಿಂದುಳಿದ ವರ್ಗ [ಬ] |
| | ಕೊಡತಿ | **ಎಸ್.ವೈ. ಮಂಜುಳಾ**<br>ಕೊಡತಿ ಕಾರ್ಮಲರಾಂ ಅಂಚೆ ವರ್ತೂರು<br>ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು. | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ [ಮಹಿಳೆ] |

| ಕ್ರ. ಸಂ. | ಗ್ರಾಮ ಪಂಚಾಯಿತಿಯ ಹೆಸರು | ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಹುದ್ದೆ | ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ |
|---|---|---|---|---|
| 5 | ದೊಡ್ಡಗುಬ್ಬಿ | **ಎನ್. ವೆಂಕಟಪ್ಪ.** ರಾಂಪುರ ದೊಡ್ಡಗುಬ್ಬಿ ಅಂಚೆ, ಬಿದರಹಳ್ಳಿ ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು. | ಅಧ್ಯಕ್ಷರು | ಸಾಮಾನ್ಯ |
| | ದೊಡ್ಡಗುಬ್ಬಿ | **ಮುನಿಸ್ವಾಮಿ. ಎಂ.** ರಾಂಪುರ ದೊಡ್ಡಗುಬ್ಬಿ ಅಂಚೆ, ಬಿದರಹಳ್ಳಿ ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು. | ಉಪಾಧ್ಯಕ್ಷರು | ಹಿಂದುಳಿದ ವರ್ಗ [ಅ] |
| 6 | ಕಣ್ಣೂರು | **ರಮಾದೇವಿ.ಎಲ್** ಯರಪ್ಪನಹಳ್ಳಿ, ಕಣ್ಣೂರು ಅಂಚೆ ಬಿದರಹಳ್ಳಿ ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು. | ಅಧ್ಯಕ್ಷರು | ಹಿಂದುಳಿದ ವರ್ಗ [ಅ] [ಮಹಿಳೆ] |
| | ಕಣ್ಣೂರು | **ಮುನಿನಾರಾಯಣಸ್ವಾಮಿ** ಕಾಡುಸೊಣ್ಣಪ್ಪನಹಳ್ಳಿ ಕಣ್ಣೂರು ಅಂಚೆ ಬಿದರಹಳ್ಳಿ ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು. | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ |
| 7 | ಹಾಲನಾಯಕನಹಳ್ಳಿ | **ಹೆಚ್.ಎಸ್.ಬಾಬುರೆಡ್ಡಿ** ಹಾಲನಾಯಕನಹಳ್ಳಿ, ಕಾರ್ಮಲರಾಂ ಅಂಚೆ ವರ್ತೂರು ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು. | ಅಧ್ಯಕ್ಷರು | ಸಾಮಾನ್ಯ |
| | ಹಾಲನಾಯಕನಹಳ್ಳಿ | **ಎನ್.ಚಂದ್ರಪ್ಪ** ಹಾಡೋಸಿದ್ದಾಪುರ ಕಾರ್ಮಲರಾಂ ಅಂಚೆ ವರ್ತೂರು ಹೋಬಳಿ, ಬೆಂಗಳೂರು ಪೂರ್ವ ತಾಲ್ಲೂಕು. | ಉಪಾಧ್ಯಕ್ಷರು | ಸಾಮಾನ್ಯ |
| 8 | ಬಿದರಹಳ್ಳಿ | **ಜಿ.ಎಂ. ಮುನಿಯಪ್ಪ** ಕಾಡ ಅಗ್ರಹಾರ ಕ್ಷೇತ್ರ | ಅಧ್ಯಕ್ಷರು | ಪರಿಶಿಷ್ಠ ಜಾತಿ |
| | ಬಿದರಹಳ್ಳಿ | **ಜಿ.ಹೆಚ್. ಪ್ರೇಮಕುಮಾರಿ** ಗುಂಡೂರು ಕ್ಷೇತ್ರ | ಉಪಾಧ್ಯಕ್ಷರು | ಹಿಂದುಳಿದ ವರ್ಗ [ಅ] [ಮಹಿಳೆ] |
| 9 | ಮಂಡೂರು | **ಎಂ.ಶಿವಣ್ಣ** ಹಂಚರಹಳ್ಳಿ ಕ್ಷೇತ್ರ | ಅಧ್ಯಕ್ಷರು | ಹಿಂದುಳಿದ "ಅ" ವರ್ಗ |
| | ಮಂಡೂರು | **ಕೆ.ಸಿ.ಭಾಗ್ಯಲಕ್ಷ್ಮಿ** ನಿಂಬೇಕಾಯಿಪುರ ಕ್ಷೇತ್ರ | ಉಪಾಧ್ಯಕ್ಷರು | ಪರಿಶಿಷ್ಟ ಜಾತಿ |

**ಎಂ.ಕೆ. ಅಯ್ಯಪ್ಪ**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾದಿಕಾರಿಗಳ ಕಾರ್ಯಾಲಯ, ಮತ್ತು ಜಿಲ್ಲಾ ಚುನಾವಣಾಧಿಕಾರಿಗಳ ರವರ ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ : ಚುನಾ (ಗ್ರಾ.ಪಂ)ಸಿಆರ್/34/09–10, ದಿನಾಂಕ:5ನೇ ಆಗಸ್ಟ್, 2010**

ಕರ್ನಾಟಕ ಪಂಚಾಯತ್ ರಾಜ್ ಕಾಯಿದೆ 1993 ರ ಕಲಂ 44 [2]ನೇ ಉಪ ಪ್ರಕರಣದಂತೆ ಕರ್ನಾಟಕ ರಾಜ್ಯ ಚುನಾವಣಾ ಆಯೋಗದ ಆದೇಶ ಸಂಖ್ಯೆ: ರಾಚುಆ:155:ಇಜಿಪಿ:2010 ದಿನಾಂಕ: 14–05–10 ಮತ್ತು 18–05–2010 ರ ಅನ್ವಯ ಬೆಂಗಳೂರು ಜಿಲ್ಲೆ, **ಬೆಂಗಳೂರು ಉತ್ತರ [ಅಪರ] ತಾಲ್ಲೂಕಿನ 18** ಗ್ರಾಮ ಪಂಚಾಯಿತಿಗಳಿಗೆ 2010 ನೇ ಸಾಲಿನ ಮೊದಲನೇ ಅವಧಿಗೆ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿಯನ್ನು ನಿಗದಿ ಪಡಿಸಲಾಗಿದ್ದು, ವಿವಿಧ ಹಂತಗಳಲ್ಲಿ ಸದರಿ ತಾಲ್ಲೂಕಿನ ಗ್ರಾಮ ಪಂಚಾಯಿತಿಗಳ ಕೇಂದ್ರ ಸ್ಥಾನಗಳಲ್ಲಿ ನಿಗದಿಪಡಿಸಿದ ದಿನಾಂಕದಂದು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಕ್ಕೆ ಚುನಾವಣೆ ನಡೆಸಿದ್ದು, ಚುನಾಯಿತರಾದ ಅಧ್ಯಕ್ಷ/ಉಪಾಧ್ಯಕ್ಷರ ಹೆಸರು ಮತ್ತು ವಿಳಾಸಗಳನ್ನು ರಾಜ್ಯಪತ್ರದಲ್ಲಿ ಪ್ರಕಟಿಸಲಾಗಿದೆ.

ಬೆಂಗಳೂರು ಪೂರ್ವ ತಾಲ್ಲೂಕು ಗ್ರಾಮ ಪಂಚಾಯಿತಿ ಅಧ್ಯಕ್ಷ/ಉಪಾಧ್ಯಕ್ಷರ ಹೆಸರು ಮತ್ತು ವಿಳಾಸಗಳ ವಿವರ:

ಬೆಂಗಳೂರು ಉತ್ತರ [ಅಪರ] ತಾಲ್ಲೂಕು

| ಕ್ರ. ಸಂ. | ಗ್ರಾಮ ಪಂಚಾಯಿತಿ ಹೆಸರು | ಹೆಸರು ಶ್ರೀ/ಶ್ರೀಮತಿ | ಹುದ್ದೆ | ಅಧ್ಯಕ್ಷ/ಉಪಾಧ್ಯಕ್ಷರ ಮೀಸಲಾತಿ |
|---|---|---|---|---|
| 1 | 13–ಹೆಸರಘಟ್ಟ | **ವಿ.ವಿಜಯಲಕ್ಷ್ಮಿ ಕೋಂ ಹೆಚ್.ವಿ.ರೋಹಿತಾಶ್ವ** ನಂ.14, ಹೆಸರುಘಟ್ಟ, ಬೆಂಗಳೂರು ಉತ್ತರ ತಾಲೂಕು. | ಅಧ್ಯಕ್ಷರು | ಹಿಂದುಳಿದ ವರ್ಗ–ಬಿ ಮಹಿಳೆ |
| | 13–ಹೆಸರಘಟ್ಟ | **ಆರ್.ಶಿವಾನಂದ ಬಿನ್ ಲೇ. ಎಂ.ಎಸ್.ರಾಜಣ್ಣ** ದಾಸನೇಹಳ್ಳಿ, ಹೆಸರುಘಟ್ಟ ಹೋಬಳಿ. ಬೆಂಗಳೂರು ಉತ್ತರ ತಾಲ್ಲೂಕು. | ಉಪಾಧ್ಯಕ್ಷರು | ಪರಿಶಿಷ್ಠ ಜಾತಿ |
| 2 | 14–ಹುರುಳಿಚಿಕ್ಕನಹಳ್ಳಿ | **ವಿ.ನಾರಾಯಣ** ಹುರುಳಿ ಚಿಕ್ಕನಹಳ್ಳಿ, ಕೊಡಗಿ ತಿರುಮಲಾಪುರ, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು. | ಅಧ್ಯಕ್ಷರು | ಸಾಮಾನ್ಯ |
| | 14–ಹುರುಳಿಚಿಕ್ಕನಹಳ್ಳಿ | **ವಸಂತಕುಮಾರ್ .ಎಂ.** ಐವರ್‌ಕಂಡಾಪುರ, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು. | ಉಪಾಧ್ಯಕ್ಷರು | ಹಿಂದುಳಿದ ವರ್ಗ–ಅ |
| 3 | 15–ಕಸಘಟ್ಟಪುರ | **ಮೈಲಾರಪ್ಪ** ಬ್ಯಾಲಕೆರೆ, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು. | ಅಧ್ಯಕ್ಷರು | ಪರಿಶಿಷ್ಠ ಜಾತಿ |
| | 15–ಕಸಘಟ್ಟಪುರ | **ಭಾಗ್ಯಮ್ಮ** ಕುಂಬಾರಹಳ್ಳಿ, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು. | ಉಪಾಧ್ಯಕ್ಷರು | ಸಾಮಾನ್ಯ ಮಹಿಳೆ |
| 4 | 16–ಶಿವಕೋಟೆ | **ಎ.ಮುನಿರಾಜು** ಮತ್ಕೂರು, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು. | ಅಧ್ಯಕ್ಷರು | ಪರಿಶಿಷ್ಠ ಜಾತಿ |
| | 16–ಶಿವಕೋಟೆ | **ಲಕ್ಷ್ಮಮ್ಮ** ಶಿವಕೋಟೆ, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು. | ಉಪಾಧ್ಯಕ್ಷರು | ಹಿಂದುಳಿದ ವರ್ಗ–ಅ ಮಹಿಳೆ |
| 5 | 17–ಸೊಣ್ಣೇನಹಳ್ಳಿ | **ಅನುಸೂಯಮ್ಮ** ಕಾಕೋಳು ಅಂಚೆ, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲೂಕು. | ಅಧ್ಯಕ್ಷರು | ಪರಿಶಿಷ್ಠ ಜಾತಿ |
| | 17–ಸೊಣ್ಣೇನಹಳ್ಳಿ | **ಕೆ.ಎಂ.ಧನರಾಜಯ್ಯ** ಕಾರ್ಲಾಪುರ, ಬ್ಯಾತ ಅಂಚೆ, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು. | ಉಪಾಧ್ಯಕ್ಷರು | ಸಾಮಾನ್ಯ |
| 6 | 18–ಅರಕೆರೆ | **ನರಸಿಂಹಯ್ಯ ಬಿನ್ ಮೋಟಪ್ಪ** ಸುದೇನಪುರ, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು. | ಅಧ್ಯಕ್ಷರು | ಪರಿಶಿಷ್ಠ ಜಾತಿ |
| | 18–ಅರಕೆರೆ | **ಸವಿತ ಕೋಂ ಕೆ.ಆರ್.ನಾಗರಾಜ್** ಮಾರಸಂದ್ರ, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು. | ಉಪಾಧ್ಯಕ್ಷರು | ಹಿಂದುಳಿದ "ಅ" ವರ್ಗ[ಮಹಿಳೆ] |
| 7 | 19–ರಾಜಾನುಕುಂಟೆ | **ಆರ್.ನಾರಾಯಣಪ್ಪ ಬಿನ್ ರಂಗಪ್ಪ** ಅದ್ದೇವಿಶ್ವನಾಥಪುರ ಅಂಚೆ, ಅರಕರೆ, ಹೆಸರುಘಟ್ಟ ಹೋಬಳಿ, ಬೆಂಗಳೂರು ಉತ್ತರ ತಾಲ್ಲೂಕು. | ಅಧ್ಯಕ್ಷರು | ಹಿಂದುಳಿದ ವರ್ಗ–ಅ |

